

# ಸಿದ್ಧಗಂಗಾ



ಏಪ್ರಿಲ್ ೨೦೦೨

ಶ್ರೀ ಸಂಪುಟ













ಯಾರು ದೀನದಲಿತರಿಗಾಗಿ ತಮ್ಮ ಬದುಕನ್ನು
ಅರ್ಪಿಸಿಕೊಳ್ಳುತ್ತಾರೋ ಅವರೇ ಮಹಾನುಭಾವರು

- ಶ್ರೀವಾಣಿ







ನ್ಯಾಯವಾದ ಗಳಿಕೆ, ಶುದ್ಧವಾದ ದುಡಿಮೆ
ವ್ಯಕ್ತಿಯನ್ನು ಆತ್ಮವಿಶ್ವಾಸಿಯನ್ನಾಗಿಸುತ್ತದೆ.

- ಶ್ರೀವಾಣಿ









ಮುಖಪುಟ
ಪರಮಪೂಜ್ಯ ಶ್ರೀ ಶ್ರೀಗಳವರ ದೈನಂದಿನ ಕಾರ್ಯಕ್ರಮಗಳ ದೃಶ್ಯಾವಳಿ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೮ ಏಪ್ರಿಲ್ ೨೦೦೧ ಸಂಚಿಕೆ : ೪

ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೬೦೪೦೮೭

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ..........



ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೫೦೦/- |
| ಬಿಡಿ ಪ್ರತಿ | ರೂ. ೧೦.೦೦ |



# ಕಾಯಕಲೀಲೆಯ ಪುಣ್ಯಭಾಸ್ಕರ

ದಿನಾಂಕ ೧-೪-೨೦೦೨ಕ್ಕೆ ಸಿದ್ದಗಂಗಾ ಶ್ರೀಗಳು ೯೫ಕ್ಕೆ ಪಾದಾರ್ಪಣೆ ಮಾಡಿದರು. ೭.೪.೨೦೦೨ ರಂದು ಆ ಪುಣ್ಯನಿಮಿತ್ತ ಗುರುವಂದನ ಸಮಾರಂಭ ಶ್ರೀಮಠದಲ್ಲಿ ನಾಡು ಕೃತಜ್ಞತೆಯನ್ನು ಸಮರ್ಪಿಸುತ್ತಿರುವ ಕಾರ್ಯಕ್ರಮ. ಸರ್ವಸಮಾಜಗಳ ಪ್ರೀತಿ ಪ್ರೇಮಗಳಿಗೆ ಪಾತ್ರರಾದ ಪುಣ್ಯಸ್ವರೂಪರ ದರ್ಶನ ಆಶೀರ್ವಚನಕ್ಕಾಗಿ ಸಮಾವೇಶ ಗೊಳ್ಳುವ ಅವಿಸ್ಮರಣೀಯ ದೃಶ್ಯ.

ಒಮ್ಮೆ ಕರ್ನಾಟಕ ವಿಶ್ವವಿದ್ಯಾಲಯದ ಘಟಿಕೋತ್ಸವ ಸಮಾರಂಭದಲ್ಲಿ ಮಹಾಸ್ವಾಮಿಗಳಿಗೆ ಗೌರವ ಡಾಕ್ಟರೇಟ್ ಮನ್ನಣೆಯನ್ನು ನೀಡಲು ಅಂದಿನ ಕುಲಪತಿ ಡಾ|| ದಾ.ಚಿಂ. ಪಾವಟೆಯವರು ಆಮಂತ್ರಿಸಿದ್ದರು. ಸ್ವಾಮೀಜಿ ನಿರಾಡಂಬರದಲ್ಲಿ ವೇದಿಕೆಗೆ ಬಂದರು. ನಿಮಗೆ ಕೃತಜ್ಞ, ಆದರೆ ಹೆಚ್ಚು ಸಮಯ ನಾನಿಲ್ಲಿ ಮಾತನಾಡ ಹತ್ತಿದರೆ ನನ್ನ ಮೂರು ಸಾವಿರ ವಿದ್ಯಾರ್ಥಿಗಳು ಹೊಟ್ಟೆಗೆ ಪ್ರಸಾದವಿಲ್ಲದೆ ನರಳುತಾರೆ. ನನಗೆ ಅಪ್ಪಣೆ ಕೊಡಿ ಎಂದು ಹೇಳಿ ಅಲ್ಲಿಂದ ಕ್ಷಿಪ್ರದಲ್ಲೇ ತೆರಳಿದರು. ಇಂತಹ ಸೇವಾ ತತ್ಪರತೆ, ಆಧ್ಯಾತ್ಮ ಮನೋಭಾವ, ಆತ್ಮಬಲ, ಆತ್ಮಗೌರವಗಳು ಮಠದ ಸ್ವಾಮಿಗಳಲ್ಲಿದ್ದರೆ ಅಂತಹವರು ಕಟ್ಟಿದ ವಿದ್ಯಾಸಂಸ್ಥೆ, ಅನ್ನದಾಸೋಹಗಳ ಮರ್ತ್ಯದ ಬಾಳನ್ನೇ ಅಮರ್ತ್ಯದ ಸೀಮೆಗೆ ಕೊಂಡೊಯ್ಯುತ್ತವೆ ಎನ್ನುವ ಪ್ರಾಜ್ಞರ ನುಡಿಗಳು ಸ್ವಾಮಿಗಳ ವ್ಯಕ್ತಿತ್ವಕ್ಕೆ ಹಚ್ಚಿಟ್ಟ ಭಕ್ತಿದೀಪಗಳಾಗಿವೆ.

ಸ್ವಾಮಿಗಳು ಏಕಾಂತದಲ್ಲಿ ಮೂಗು ಹಿಡಿದು ಕುಳಿತು ತಪಸು ಮಾಡಿದವರಲ್ಲ. ಕರ್ತೃತ್ವ ಶಕ್ತಿಗೆ ಅದೊಂದು ವಂಚನೆಯೆಂದರಿತವರು. ಕ್ರಿಯಾಶಕ್ತಿಯ ಉಪಯೋಗ ವಾಗದು ಅದರಿಂದ ಎಂದು ಧೃಡವಾಗಿ ನಂಬಿದವರು. ಸತ್ಯಕ್ಕಾಗಿ ಶುದ್ಧತೆಗಾಗಿ ಹೋರಾಡಬೇಕೆಂದು ಸಂಕಲ್ಪಿಸಿದರು. ಅದರಿಂದ ಅತ್ಯುಚ್ಛವಾದ ಸಾಮರ್ಥ್ಯ ಸಮನಿಸುತ್ತದೆ ಎಂಬುದನ್ನು ಮನಗಂಡವರು. ಅಂಥ ಹೋರಾಟ ಹೆರವರೊಡನಲ್ಲ, ಹಿಂಸಾತ್ಮಕವಲ್ಲ ಆತ್ಮಸಾಧನೆಗಾಗಿ ಮತ್ತು ಅಖಿಲ ಸಮಾಜದೇಳ್ಗೆಗಾಗಿ ಕರ್ತೃತ್ವ ಶಕ್ತಿ ಸಂಪಾದನೆಗಾಗಿ ಎಂಬ ಸತ್ಯದರ್ಶಕ್ಕಾಗಿ ಎಂದು ನಡೆದಿದ್ದಾರೆ. ಕಳೆದ ೯೪ ವರ್ಷಗಳಿಂದ ಸ್ವಾಮಿಗಳು ಸೇವಾ ಶ್ರೀಗಿರಿಯನ್ನು ಹೊತ್ತು ನಡೆದಿರುವ ಜಂಗಮ ಹಿಮಾಲಯವಾಗಿದ್ದಾರೆ. ಚಲಿಸುವ ದಾಸೋಹ ಸಾಗರವೆನಿಸಿದ್ದಾರೆ. ಅದಕ್ಕಾಗಿ ತಮ್ಮ ಶಿವಕಾಯವನ್ನು ಜೋಪಾನವಾಗಿ ಎಚ್ಚರದಿಂದಿದ್ದು ಕಾಪಾಡಿಕೊಂಡು ಬಂದಿದ್ದಾರೆ. ಯಾವುದನ್ನೂ ಅತಿಯಾಗದಂತೆ ನೋಡಿಕೊಂಡಿದ್ದಾರೆ. ಕಾಯಕವಂತನ ನಿರ್ದಿಷ್ಟ ನಿಯಮಗಳನ್ನು ಪಾಲಿಸುತ್ತಿದ್ದಾರೆ. ಮಿತಿಮೀರಿ ಊಟ ಮಾಡಬಾರದು, ಉಪವಾಸವಿರಬಾರದು, ವ್ಯಸನಗಳಿಗೆ ಒಳಗಾಗಬಾರದು, ಹೆಚ್ಚು ನಿದ್ದೆ ಮಾಡಬಾರದು, ನಿದ್ದೆಯಿಲ್ಲದೆ ಇರಬಾರದು. ನಿಯತ ನಿದ್ದೆಯೂ ಜಡವಾಗಿರಬಾರದು. ಆಗಲೂ ಜಾಗೃತವಾಗಿರಬೇಕು. ಶಿವಭಾವ ಸಂಸ್ಕಾರವಿರಬೇಕು. ಶರಣನ ನಿದ್ದೆ ಸಮಾಧಿ ಸ್ವರೂಪದ್ದಾಗಿರಬೇಕು. ಇದು ಕಾಯಕ ಯೋಗದ ನಿಯತಿ. ಕಾಯಕವಂತನಿಗೆ ಬೇರೆ ಯೋಗಾಭ್ಯಾಸದ ಅಗತ್ಯವಿಲ್ಲ. ಪ್ರಸಾದ ಕಾಯಕವನ್ನಾಗಿಸುವ ಸನ್ನಾಹ ಕಾಯಕವಂತನದು ಎಂಬುದನ್ನು ಆಚರಿಸಿ ತೋರಿಸುತ್ತಿದ್ದಾರೆ.

ಕಾಯಕ, ದಾಸೋಹ, ಲಿಂಗಪೂಜೆ ಮತ್ತು ರಾಷ್ಟ್ರ ಚಿಂತನೆಗಳು ಸ್ವಾಮೀಜಿಯವರ ಚತುರ್ಭುಜಗಳಾಗಿವೆ. ರಾಷ್ಟ್ರಪ್ರೇಮ, ಸ್ವಾನುಭಾವ ಪ್ರೇಮ, ಕರ್ತವ್ಯನಿಷ್ಠೆ, ಸಮಯ ಪಾಲನೆಗಳು ಅವರ ಶ್ವಾಸೋಚ್ಛ್ವಾಸನಗಳು. ಕಾಯಕವಿಲ್ಲದ ಜೀವನ ಮೃಗೀಯ ಜೀವನವೆನ್ನುತ್ತಾರೆ. ಕೂತು ಊಟ ಮಾಡಬಾರದು, ದುಡಿದುಣ್ಣಬೇಕು ಎನ್ನುವ ಸೊಲ್ಲು ಅವರದು, ಲಿಂಗಪೂಜೆಗೂ ಕಾಯಕಕ್ಕೂ ಎಡೆಬಿಡದ ನಂಟು. ಲಿಂಗವ ಪೂಜಿಸದೆ ಕಾಯಕ ಮಾಡುವಂತಿಲ್ಲ. ಕಾಯಕದಿಂದ ಬಂದ ಸೊಮ್ಮುಲಿಂಗ ಪೂಜೆಗೆ ಸಲ್ಲಬೇಕು. ಲಿಂಗಪೂಜೆಯೆಂಬುದೊಂದು ವಿಶ್ವಪೂಜೆ. ವಿಶ್ವವಿರಾಟ್ ರೂಪವೇ ಲಿಂಗ, ಅನಂತಕ್ಕೆ ಇಟ್ಟ ಹೆಸರು ಲಿಂಗ. ಅದು ವ್ಯಕ್ತಿನಿಷ್ಠ ಪೂಜೆಯಲ್ಲ; ವಿಶ್ವನಿಷ್ಠ ಸಮಷ್ಠಿನಿಷ್ಠಪೂಜೆ ಅದು ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ, ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿವ ಪೂಜೆಯಾಗಿರದೆ ''ನಿಮ್ಮನಿಲವಿಂಗೆ'' ಕುದಿವ ಪೂಜೆ ಹಾಗೆಂದೇ ರಾತ್ರಿ ೨.೧೫ಕ್ಕೆ ಏಳುತ್ತಾರೆ ಸ್ವಾಮಿಗಳು. ಜಗದ ಸೇವೆಗೆ ಬಂದ ಅವರಿಗಿಲ್ಲ ನಿದ್ದೆ. ಅವರಿಗ್ಯಾವಾಗ ನಿದ್ದೆ ? ಲೋಕ ಕೇಳುತ್ತಲೇ ಇದೆ. ಆದರೆ ಅವರಿಗೆ ನಿದ್ದೆಯಲ್ಲೂ ಕಾಯಕದ ಚಿಂತನೆಯೇ ನಡೆದಿರುತ್ತದೆ.

ಸ್ವಾಮಿಗಳು ಸಮಯ ಸಂದರ್ಭಗಳು ಸಿಕ್ಕಿದಾಗ ಸಭೆ ಸಮಾರಂಭಗಳಲ್ಲಿ ತಮಗೆ ಯಾವಾಗ ಸಂತೋಷವಾಗುತ್ತದೆ ಎಂಬುದನ್ನು ಹೇಳುತ್ತಿರುತ್ತಾರೆ. ಶ್ರೀಮಠದಲ್ಲಿ ಆಶ್ರಯ ಪಡೆದಿರುವ, ವ್ಯಾಸಂಗ ಮಾಡುತ್ತಿರುವ ಚಿಕ್ಕಪುಟ್ಟ ಮಕ್ಕಳು ಊಟ ಮಾಡಿದ ನಂತರ ಮಾತಾಡಿಕೊಂಡು ಬರುವುದನ್ನು ಕಂಡಾಗ ಎಲ್ಲಿಲ್ಲದ ಆನಂದವಾಗುತ್ತದೆ ಎನ್ನುತ್ತಾರೆ; ಅದರಲ್ಲಿ ಶಿವದರ್ಶನವನ್ನು ಅನುಭವಿಸುತ್ತಾರೆ. ಮತ್ತೊಂದು ಮಾತು - ಸ್ವಾಮಿಗಳಿಗೆ ಕಾಯಕ ಒಂದು ಜ್ಯೋತಿ; ಫಲನಿರೀಕ್ಷಿಸದ ಬೆಳಕು. ಸಕಾಮತೆ ನಿಷ್ಕಾಮತೆಗಳನ್ನು ಮೀರಿದ ಸಹಜಕ್ರಿಯೆ. ಅದು ಅವರಿಗೆ ಸಹಜ ದಾಸೋಹವೂ ಅಹುದು; ಸಹಜ ಧರ್ಮವೂ ಅಹುದು. ಕಾಯಕ ಸುಖ-ಸಂಪದ ಅನಪೇಕ್ಷಿತ ಮಾತ್ರವಲ್ಲ, ಕೀರ್ತಿ ಯಶಸ್ಸುಗಳನ್ನು ಬಯಸದ್ದು. ಅಲ್ಲಿ ಅಂಗಭೋಗಕ್ಕೆ ಅವಕಾಶವೆಲ್ಲಿ ? ಎಲ್ಲವೂ ಲಿಂಗಭೋಗದ ಶರಣಪಥ. ನಿಂದೆವಂದನೆಗಳನ್ನು ದಾಟಿದ ಶಿವಯೋಗ ಅಲ್ಲಿ. ಕಾಯಕವನ್ನೆ ಶಿವಯೋಗವನ್ನಾಗಿಸಿರುವ ಸರಳತೆಗೆ ದಾಸೋಹ ಕಿರೀಟವನ್ನು ಮುಡಿಸಿ ಶ್ರೀಮಠವನ್ನು ಬಸವ ಧರ್ಮದ ಮಹಾಮನೆಯನ್ನಾಗಿಸಿದ ನಿರಾಡಂಬರದ ನಿರ್ಮಲ ನಿರಾಳ ಮಾನವತೆಯಲ್ಲಿ ಮೈವೆತ್ತು ಬಂದಿರುವ ಸ್ವಾಮಿಗಳಿಗೆ ಕಾಯಕ ಒಂದು ಲೀಲೆ. ಲೀಲೆ ಎಂದರೆ ಆಟ, ಆಟದಲ್ಲಿ ಆನಂದವಿರುತ್ತದೆ. ಆನಂದದ ಅನ್ವೇಷಣೆಯೇ ಮಾನವನ ಜೀವನದ ಗುರಿ. ಅದಕ್ಕಾಗಿ ಏನೆಲ್ಲ ಧರ್ಮ, ದೇವರು, ಪೂಜೆ, ವ್ರತ, ಯೋಗ ಮುಂತಾದವುಗಳು. ಎಲ್ಲವೂ ಆನಂದಕ್ಕಾಗಿ, ನೆಮ್ಮದಿಗಾಗಿ, ತನ್ನ ತಾನರಿಯುವುದಕ್ಕಾಗಿ ಎಂಬುದನ್ನು ಸ್ವಾಮಿಗಳು ತಮ್ಮ ಕಾಯಕ ಲೀಲೆಯಿಂದ ತೋರಿಸುತ್ತಿದ್ದಾರೆ. ನಾವು ಅದನ್ನು ನೋಡಿ ಕಲಿಯಬೇಕು; ಅಷ್ಟೇ.

ನಿರ್ಭೀತ ಪತ್ರಕರ್ತರಾದ ಡಾ|| ಪಾಟೀಲ ಪುಟ್ಟಪ್ಪನವರೆನ್ನುತ್ತಾರೆ ''ಮುಖ್ಯಮಂತ್ರಿ ಆಗಿರಬಹುದು, ಪ್ರಧಾನಮಂತ್ರಿ ಆಗಿರಬಹುದು, ರಾಷ್ಟ್ರಪತಿಯಾಗಿರ ಬಹುದು ಆದರೆ ಅವರಲ್ಲಿ ಹೆಚ್ಚಿನವರು ಯಾರೊಬ್ಬರೂ ಹೇಳುವ ಹೆಸರೆನಿಸಿ ಇತಿಹಾಸದಲ್ಲಿ ಉಳಿಯುವುದಿಲ್ಲ. ಆದರೆ ಲಕ್ಷಾವಧಿ ಜನರ ಜೀವನದಲ್ಲಿ ಶಕ್ತಿ ಚೈತನ್ಯ ಹಾಗೂ ಪ್ರಕಾಶವನ್ನು ತುಂಬಿದ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಹೆಸರು ಚಿರಂತನವಾಗಿ ಉಳಿಯುತ್ತದೆ'' ಎಂಬುದಾಗಿ.

ಪೂಜ್ಯ ಸ್ವಾಮಿಗಳು ತಮ್ಮ ಸೇವಾ ಜೀವನದುದ್ದಕ್ಕೂ ನಡೆಸಿಕೊಂಡು ಬಂದ ಕಾಯಕ ಲೀಲೆ ದಾಸೋಹ ಮಣಿಹ ರಾಷ್ಟ್ರಚಿಂತನೆ ಮಾನವತಾ ಧರ್ಮಪ್ರೇಮಗಳು ಪಾಟೀಲ ಪುಟ್ಟಪ್ಪನವರ ಮಾತಿಗೆ ಸ್ಫೂರ್ತಿಯಾಗಿವೆಯಲ್ಲವೇ ?

೯೫ನೇ ಶುಭ ಜನ್ಮದಿಚಾರಣೆ ಗುರುವಂದನ ಸಮಾರಂಭದ ಪವಿತ್ರ ಸಂದರ್ಭದಲ್ಲಿ ಪರಮಪೂಜ್ಯ ಕಾಯಕ ಲೀಲಾಯೋಗಿಗೆ ದಾಸೋಹ ದ್ರಷ್ಟಾರರಿಗೆ 'ಸಿದ್ಧಗಂಗಾ' ಭಕ್ತಿಪೂರ್ವಕ ಪ್ರಣಾಮಗಳನ್ನರ್ಪಿಸುತ್ತದೆ.

– ಸಂಪಾದಕ







# ನಿಂದೆ

ಲೋಕದ ಡೊಂಕನ್ನು ಗಮನಿಸುವುದರಲ್ಲಿಯೇ ಜೀವಿತದ ಬಹು ಅವಧಿಯನ್ನು ಕಳೆಯುವುವರೇ ತಮ್ಮ ದೋಷಗಳನ್ನು ಅವಲೋಕಿಸುವವರು ತುಂಬ ವಿರಳ. ''ನಿಂದಿಸದಿರಾರನು'' ಎನ್ನುತ್ತಾರೆ ಮಹಾನುಭಾವಿಗಳು. ''ಲೋಕದ ಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನೆರೆಮನೆಯವರ ದುಃಖಕ್ಕೆ ಅಳುವವರ ಮೆಚ್ಚ ಕೂಡಲ ಸಂಗಮದೇವ'' ಎನ್ನುತ್ತಾರೆ ಅಣ್ಣ ಬಸವಣ್ಣನವರು. ನಿಂದೆಗಿಂತ ದೊಡ್ಡ ಪಾಪವಿಲ್ಲ ಎಂದಿದ್ದಾರೆ. ನಿಜಗುಣ ಶಿವಯೋಗಿಗಳು ''ದುರಿತದೊಳ್ ಪಾಪವಾವುದು ನಿಂದೆ'' ಎಂದೇ ಅವರು ಸ್ಪಷ್ಟಪಡಿಸಿದ್ದಾರೆ.

ಮನುಷ್ಯನ ದೌರ್ಬಲ್ಯಗಳಲ್ಲಿ ಅತ್ಯಂತ ಸರ್ವಸಾಮಾನ್ಯವಾದ ದೌರ್ಬಲ್ಯವೆಂದರೆ ನಿಂದೆಯಾಗಿದೆ. ಸದಾಕಾಲ ಇನ್ನೊಬ್ಬರನ್ನು ಕುರಿತು ಕೆಟ್ಟದಾಗಿ ಮಾತಾನಾಡುವುದು, ದೂಷಿಸುವುದು, ಆಡಿಕೊಳ್ಳುವುದು, ಆಕ್ಷೇಪಿಸುವುದು ಕೆಲವರ ಸ್ವಭಾವವಾಗಿ ಬಿಟ್ಟಿರುತ್ತದೆ. ದೋಷಗಳನ್ನು ಹುಡುಕುವುದೇ ಅಂಥವರ ಹುಟ್ಟು ಗುಣವಾಗಿರುತ್ತದೆ. ಅಂಥವರೂ ಇರಬೇಕು ಎನ್ನುತ್ತಾರೆ ಪುರಂದರದಾಸರು ''ನಿಂದಕರಿರಬೇಕು ಕೇರಿಯೊಳಗೆ ಹಂದಿಯಿರುವ ಹಾಂಗೆ'' ಎನ್ನುತ್ತಾರೆ ಅವರು. ನಿಂದಕರನ್ನು ಹಂದಿಗೆ ಹೋಲಿಸಿದ್ದಾರೆ. ಹಂದಿ ಪ್ರೀತಿಸುವುದು ಕೇರಿಯೊಳಗಿರುವ ಹೇಸಿಗೆಯನ್ನು. ಇನ್ನೊಬ್ಬರ ಲೋಪದೋಷವನ್ನು ಕಂಡು ಹಿಡಿಯುವುದರಲ್ಲಿಯೇ ಸಂತೋಷವನ್ನು ಕಾಣುವ ನಿಂದಕರಿಗೆ ಅಮೃತ ರುಚಿಸಲಾರದು. ಹೆಳವ ವಾರಣಾಸಿಯನ್ನು ನಿಂದಿಸುವುದರಿಂದ, ಗೂಬೆ ಸೂರ್ಯನನ್ನು ನಿಂದಿಸುವುದರಿಂದ ಅವುಗಳಿಗೇನೂ ಕುಂದುಂಟಾಗಲಾರದು. ಆದರೆ ಮಾತು ಮನುಷ್ಯನ ಯೋಗ್ಯತೆಯನ್ನು ನಿರ್ಧರಿಸುತ್ತದೆ ಎನ್ನುವಂತೆ ನಿಂದೆ ಮಾತುಗಳನ್ನಾಡುವವರ ಯೋಗ್ಯತೆಯನ್ನು ಪ್ರಾಜ್ಞರು ತಿಳಿಯುತ್ತಾರೆ. ನಿಂದೆ ನುಡಿಗಳು ಕಿವಿಗೆ ಹಿತವಾಗಿ ಕಂಡು ಬಂದರೂ ಮನಸ್ಸಿನ ಅಧೋಗತಿಗೆ ಅವು ಹೇಗೆ ಕಾರಣವಾಗುತ್ತವೆ ಎಂಬುದನ್ನು ತಿಳಿದಾಗ ದುಃಖವಾಗ ದಿರದು. ನಿಂದೆ ಹಿಂಸೆಯ ಪರೋಕ್ಷ ರೂಪ. ಸಾತ್ವಿಕತೆಯ ಅಭಾವವನ್ನು ತಿಳಿಸುವುದರ ಲಕ್ಷಣ. ಸರ್ವಜ್ಞ ಕವಿ ಹೇಳುತ್ತಾನೆ ''ಮಾತಿನಿಂ ಹಗೆ ಹತಿಯು'' ಎಂಬುದಾಗಿ. ಮಾತು ಇನ್ನೊಬ್ಬರನ್ನು ಕೊಲ್ಲುವಂತೆ ಆಯುಧಗಳು ಕೊಲ್ಲಲಾರವು. ಜೈನ ಧರ್ಮ ಗ್ರಂಥವಾದ ವಡ್ಡಾರಾಧನೆಯಲ್ಲಿ ಒಂದು ಕಥೆ ಬರುತ್ತದೆ. ಅಗ್ನಿಭೂತಿ ವಾಯುಭೂತಿ ಎಂಬ ಇಬ್ಬರು ಸಹೋದರರು ಒಬ್ಬ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡುತ್ತಾರೆ. ಅನಂತರ ತಮ್ಮ ನಗರಕ್ಕೆ ಬಂದು ರಾಜನ ಆಸ್ಥಾನದಲ್ಲಿ ಮಂತ್ರಿಗಳಾಗಿರುತ್ತಾರೆ. ಒಮ್ಮೆ ಗುರುಗಳು ಭಿಕ್ಷಾರ್ಥ ಆ ನಗರಕ್ಕೆ ಬಂದು ತಮ್ಮ ಶಿಷ್ಯರುಗಳ ಮನೆಗೆ ಹೋದ ಸಂದರ್ಭದಲ್ಲಿ ಅಗ್ನಿಭೂತಿ ಭಕ್ತಿಯಿಂದ ಸತ್ಕರಿಸಿ ಬೀಳ್ಕೊಟ್ಟರೆ, ವಾಯುಭೂತಿ ಅತಿಘೋರವಾಗಿ ನಿಂದಿಸಿ ಕಳುಹಿಸುತ್ತಾನೆ. ಗುರುಗಳು ಶಾಂತವಾಗಿ ಹಿಂದಿರುಗುತ್ತಾರೆ. ಗುರುವನ್ನು ನಿಂದಿಸಿದ ಫಲವಾಗಿ ವಾಯುಭೂತಿ ಹಲವು ಜನ್ಮಗಳಲ್ಲಿ ಹೆಣ್ಣು ಕತ್ತೆಯಾಗಿ, ಹೆಣ್ಣು ನಾಯಿಯಾಗಿ, ಹಂದಿಯಾಗಿ, ಹುಟ್ಟು ಕುರುಪಿಯಾಗಿ ಹುಟ್ಟಿ ಬರಬೇಕಾಗುತ್ತದೆ, ನಿಂದೆ ಎಂಬುದು ಮಹಾ ಪಾಪವೆಂಬುದರ ಅರಿವಾಗುತ್ತದೆ. ಕೊನೆಗೆ ವಾಯುಭೂತಿ ಘೋರ ತಪಸ್ಸು ಮಾಡಿ ಕೇವಲಿಯಾಗುತ್ತಾನೆ.

ನಿಂದೆ ಮಾಡುವ, ನಿಂದೆ ಕೇಳುವ ಎರಡೂ ದೌರ್ಬಲ್ಯಗಳೂ ಮಹಾಪಾಪವೆಂದೇ ತಿಳಿಯಬೇಕು. ಮಾನವನ ಬಹು ಕೆಟ್ಟಗುಣವೆನ್ನಬಹುದಾದ ನಿಂದೆಗೆ ಎಲ್ಲರೂ ಒಳಗಾಗುವಂಥವರೇ. ಅದಕ್ಕೆ ಜಾತಿ, ಲಿಂಗ, ವಯಸ್ಸು, ಅಧಿಕಾರ, ಸ್ಥಾನ, ಕಲಿಕೆ, ಕಾಲ, ದೇಶಗಳ ಪರಿಧಿಯಿಲ್ಲ. ನಿಂದೆಯನ್ನು ಗೆಲ್ಲುವುದು ಹೇಗೆಂದರೆ ಪ್ರತಿದಿನ, ಪ್ರತಿಕ್ಷಣ ತಾವು ಮಾಡುವ ಪಾಪ ಪುಣ್ಯದ ಲೆಕ್ಕಾಚಾರ ಮಾಡುತ್ತಿರಬೇಕು. ವಿದ್ಯಾರ್ಥಿಗಳಾದ ನೀವು ಈ ಎಳೆಯ ವಯಸ್ಸಿನಿಂದಲೇ ನಿಂದೆ ಮಾಡದಂಥ ಸದ್ಗುಣ ಕಲಿಯುವವರಾಗಬೇಕು. ನಿಂದೆ ನಿಂದಾಗಬಾರದು, ನಿನ್ನಿಂದಾಗಬಾರದು.

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಮಂಜಕನ ದೃಷ್ಟಿಯಲ್ಲಿ ತೋರುವ ಇಂದ್ರಿಯ ಭೋಗಂಗಳು*
*ಮಹೇಂದ್ರ ಜಾಲವಾಗಿರ್ಪವು*
*ಇದ ಮನಸ್ಸಿನ ವಿಕಾರವೆಂಬುದನೊಬ್ಬರು ತಿಳಿಯದೆ*
*ತಬ್ಬಿಬ್ಬುಗೊಳ್ಳುತ್ತಿದ್ದಾರೆ ನೋಡಾ ತ್ರೈ ಜಗವೆಲ್ಲ.*
*ಮಂಜರ ದೃಷ್ಟಿಯಲ್ಲಿ ಚಂದ್ರಮನುದಯವಾಗಲು*
*ಇಂದ್ರಿಯ ಭೋಗಗಳಂ ಮಹೇಂದ್ರ ಜಾಲವೆಲ್ಲ*
*ಬೆಂದು ಹೋದವು ನೋಡಾ*
*ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.*

ಪ್ರಪಂಚದಲ್ಲಿ ಏಕದೃಷ್ಟಿಯನ್ನುಳ್ಳ ಮಾಯಾ ಮಂಜರನ ಭಿನ್ನಜ್ಞಾನ ದೃಷ್ಟಿಯ ಮುಂದೆ ಕಾಣುವ ಇಂದ್ರಿಯ ವಿಷಯ ವಿಕಾರವೆಲ್ಲವು, ಕನಸಿನ ತೋರಿಕೆಯಂತೆ ತೋರಿ ಅಡಗುತ್ತವೆ. ಇಂದ್ರಿಯ ವಿಕಾರವೆಲ್ಲ ಮನೋವಿಕಾರವೆಂದು ಬಿಟ್ಟು ಕಳೆದು, ಲಿಂಗದಲ್ಲಿ ಏಕಾರ್ಥವನರಿಯದೆ, ಮೃದತೃಷ್ಣಾ ಜಲಕ್ಕೆ ಮೃಗಗಳು ಧಾವಿಸಿ ಬಳಲುವ ಹಾಗೆ, ಇಂದ್ರಿಯ ವಿಷಯ ರಸಕ್ಕೆ ಇಚ್ಛೈಸಿದ ಮೂರು ಲೋಕದವರೆಲ್ಲ ಕಾಲ ಕಾಮಗಳ ಪೀಡೆಯಲ್ಲಿ ಕೋಟಲೆಗೊಳ್ಳುತ್ತಿದ್ದಾರೆ. ಅಂತಹ ಜೀವನ ಭಿನ್ನಜ್ಞಾನದೃಷ್ಟಿಯ ಮಧ್ಯದಲ್ಲಿ ಸುಜ್ಞಾನೋದಯವಾದಾಗ ತೋರಿ ಅಡಗುವ ಇಂದ್ರಿಯ ವಿಷಯಗಳೆಲ್ಲ ಜ್ಞಾನಾಗ್ನಿಯಿಂದ ಸಂಸ್ಕಾರಗೊಂಡು ಲಿಂಗಕ್ಕೆ ಯೋಗ್ಯವಾದರೆ ಮನಸ್ಸಿನ ಭ್ರಾಂತಿಯಳಿದು ನಿತ್ಯನಾಗಿರುವನು.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ -
ಶ್ರೀತೋಂ.ಸಿ.ಕೈಂ.ಸೇ.ಸಂಘ, ಎಡೆಯೂರು-ಗದಗ)

**ಶ್ರೀವಾಣಿ**

**ಮಾನವಪ್ರಜ್ಞೆ ಜಾಗೃತವಾಗದ ಹೊರತು ಇಂದಿನ ಸಮಸ್ಯೆಗಳಿಗೆ ಪರಿಹಾರ ಕಾಣದು.**

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

''ಘನದಲ್ಲಿ ಗಂಭೀರ ನುಡಿಯಲ್ಲಿ ಪರವಶ''
ಇರವಿನಲಿ ಪರಶಿವನೆ ಆಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದಕ ಸಾಧ್ಯನೆ ಶಾಸ್ತ್ರಕ ಗೋಚರ
ಶ್ರುತಿ ಸ್ಮೃತಿಗಳಿಗೆ ನಿಲುಕದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಣ್ಣ ಸೂತಕ ಕಳೆವ ಕಿವಿಯ ಸೂತಕ ಕಳೆವ
ಮನದ ಸೂತಕ ಕಳೆದು ಹರಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂತಿಂತು ಎನಬಹುದೆ ಘನಗುರುವೆ ನಿನ್ನಲೀಲೆ
ಇಹಪರದ ಸೇತುವಾಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನವ ಮನೆಯ ಮಾಡಿ ಮಹವ ಲಿಂಗವಮಾಡಿ
ಅನುವರಿದು ಆಚರಿಪ ಅನುಭಾವಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನಿಕ್ಕಿದ ದಸರಿದೊಡಕ ಬಿಚ್ಚುವರಾರು
ನೀನಲ್ಲದೆ ಪೆರರುಂಟೆ ಕರುಣಾಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನಾಡುವ ಮಾತೆಲ್ಲ ವಚನದೀಪಗಳಾಯ್ತು
ನೀನಡೆವ ಧರೆಯಲ್ಲ ಕಲ್ಯಾಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ನಡೆದರೆ ನಿರ್ಗಮ ನಿ ನುಡಿದರೆ ನಿಶ್ಯಬ್ದ''
ಶರಣ ಚಿಂತಾಮಣಿ ಪರಶಿವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ನೆರಳುಂಡ ಅರಿಸಿನ ಉರಿಯುಂಡ ಕರ್ಪೂರ
ಕಾದ ಕಬ್ಬಿಣ ಉಂಡ ಹಿಮಸಲಿಲ'' । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಮುಕ್ತಿಗೆ ಮುಖವಾಗಿ ಯುಕ್ತಿಗೆ ಹೊರಗಾಗಿ''
ಅರಿವಿಂಗೆ ಹಿರಿದಾದ ಸಿರಿಯಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**







## ಸಿದ್ಧಗಂಗೆಯ ಶ್ರೀ ಪುರುಷ

**ಎಂ.ಜಿ. ನಾಗರಾಜ್**
ಸಂಪಾದಕರು, ಮಹಾಮನೆ
221, 68ನೇ ಕ್ರಾಸ್, 5ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010



**ಗಂ**ಗೆ ಸಿದ್ಧವಾದ ನೆಲೆ ಸಿದ್ಧಗಂಗೆ, ತಪಸ್ಸಿಗೆ ಗಂಗೋತ್ರಿಯ ಚಿಮ್ಮುಗೆಯ ಸೆಲೆ, ಶುದ್ಧ ಸೊಬಗು ಉಕ್ಕುವ ತಾಣ. ಸಾಂಪ್ರದಾಯಿಕ ಭಾಷೆಯಲ್ಲಿ ಹೇಳಿದರೆ ಪವಿತ್ರ ಕ್ಷೇತ್ರ; ಭಕ್ತರ ಭಕ್ತಿಗೊಂಡು ತವನಿಧಿ. ಶಕ್ತಿ ವಿಶಿಷ್ಟಾದ್ವೈತದ, ವೀರಶೈವದ ಲಿಂಗಾಯಿತದ ಸ್ಥಲನುಡಿಗಳಲ್ಲಿ ಸೊಲ್ಲಾಡಿದರೆ ಪಿಂಡಸ್ಥಲ, ಪಿಂಡಜ್ಞಾನಸ್ಥಲ ಅರ್ಥಾತ್ ಶಿವಶುದ್ಧ ನಿಜನಿವಾಸ. ಇಂಥ ಮಂಗಳದ ಅಂಗಳದಲ್ಲಿ ನಿತ್ಯ ಜಂಗಮ ಚೇತನವಾಗಿರುವ ಶ್ರೀ ಪುರುಷ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಭಕ್ತರ ಸಿರಿ ಹರುಷ. 'ಶ್ರೀ' ಎಂಬಲ್ಲಿ ಮಂಗಳಸಿರಿ ಎಂಬರ್ಥವಿದೆ. ಶಿವ ಎಂಬರ್ಥವಿದೆ. ಭಕ್ತಿಯ ಸಂಪತ್ತು ಎಂಬ ಅರ್ಥವಿದೆ. 'ಪುರುಷ' ಎಂಬಲ್ಲಿ ಪುರುಷೋತ್ತಮತೆಯ ಸಂಕೇತವಿದೆ. ಅದು ಸಂದಿಲ್ಲದಪ್ಪ ವ್ಯಕ್ತಿತ್ವ, ನ್ಯೂನವಿಲ್ಲದ ವ್ಯಕ್ತಿತ್ವ. ವ್ಯಷ್ಟಿಯನ್ನು ಸಮಷ್ಟಿಯೊಳಗಾಗಿಸುವ ಇಳೆಯ ಕರ್ತಾರ ಸಿದ್ಧತ್ವ. ಶೂನ್ಯದಂತೆ ತೆರೆದುಕೊಂಡ ಬ್ರಹ್ಮಾಂಡ ಬಿತ್ತರ ನಿಸ್ಸೀಮ ಬಯಲು. ವರ್ತಮಾನದಲ್ಲಿ ಈ ವರ್ಣನೆ ಸಾಂಗತ್ಯವೆ ಎಂದಾಗ, ಉತ್ತರಿಸುವುದು ಪವಾಡವಲ್ಲ, ಲೀಲೆಯಲ್ಲ, ಬದಲು ಸಿದ್ಧಗಂಗೆಯಲ್ಲಿನ ಕಾಯಕದ ಸಾಕ್ಷಾತ್ಕಾರ. ನೋಡಿ ನಲಿಯಬೇಕು, ನಡೆದು ಕಾಣಬೇಕು, ನುಡಿದು ಹರುಷಿಸಬೇಕು. ದೋಷಗಳು ಮಾನವ ವ್ಯಕ್ತಿತ್ವದಲ್ಲಿ ಸಹಜ ವಾಸ್ತವ; ಅವುಗಳ ನಿರಸನ ಸಿದ್ಧಗಂಗೆಯ ಅಧ್ಯಾತ್ಮ ಸಿದ್ಧಿಯ ವಾಸ್ತವ.

ಕ್ರಿ.ಶ. ೧೨೦೦ರ ಏಕಾಂತರಾಮಯ್ಯನ ಅಬಲೂರು ಶಾಸನದಲ್ಲಿ **'ಶಂಭು ಕಲ್ಪದ್ರುಮವಾದಂ ರಾಮಂಗೀಗರ್ತ್ತಿಯಿಂ ವಾಚ್ಛಿತ ಫಳಚಯಮಂ ಸಂತತೋತ್ಸಾಹದಿಂದಂ'** - ಎಂದಿದೆ. ಅಂದರೆ ಏಕಾಗ್ರಭಕ್ತಿ ಶಿವಯೋಗದಲ್ಲಿ ನಿಸ್ಪೃಹ ವೃತ್ತಿಯಿಂದ ಚರಿಯಿಸುತ್ತಿದ್ದ ಏಕಾಂತರಾಮಯ್ಯನಿಗೆ ಶಂಭವು ಉತ್ಸಾಹದಿಂದ ಪ್ರೀತಿಯಿಂದ ಇಚ್ಛಿತ ಶಿವಫಲಗಳನ್ನು ನೀಡಿದ

ಕಲ್ಪವೃಕ್ಷನಾಗಿದ್ದನಂತೆ. ಹೀಗೆಯೇ ವರ್ತಮಾನದ ಭಕ್ತಿವಂತ ಜನತೆ ಭಕ್ತಿಯ ಕಲ್ಪ ದ್ರುಮವಾಗಿ ಓಡೋಡಿ ಬಂದು ಏನೆಲ್ಲ ಆತ್ಮೀಯ ಭಕ್ತಿಯಿಂದ ಸಿದ್ಧಗಂಗೆಯ ಶ್ರೀ ಪುರುಷನಲ್ಲಿ ಅರ್ಪಿಸುತ್ತದೆ ! ಅದಕ್ಕೆ ಸಂವೇದನವಾದ ಈ 'ಶ್ರೀ ಪುರುಷ' ಭಕ್ತ ಮನಸ್ಸಿಗೆ ಸಾಂತ್ವನದ ಕಲ್ಪವೃಕ್ಷವಾಗಿದ್ದಾರೆ. ಭಕ್ತಿಯನ್ನು ಕಾಯಕದಲ್ಲಿ ಮೆರೆಸಿದ್ದಾರೆ, ಚರಿಯಿಸಿದ್ದಾರೆ.

ಕ್ರಿ.ಶ. ೧೨೨೦ ರ ಹೊಯ್ಸಳ ಮಂತ್ರಿ ಶಿಖಾಮಣಿ ದಂಡಾಧೀಶ ಕುವರ ಲಕ್ಷ್ಮನ ಶಾಸನದಲ್ಲಿ ಶಿವಸುತ್ತಿ ಮಾಡಿ 'ಶ್ರೀಯಂ
ಶ್ರೀಧರ ಆಯುವಂ
ವನಜಜಂ ಗೌರೀವರಂ
ಕೀರ್ತಿಯಂ !
ಕಾಯಕ್ಕೋಪ್ಪುವ
ಕಾಂತಿಯಂ ವಿಧು
ದಿನೇಶಂ ತೇಜಮಂ !.....
ಎಣ್ಬರುಂಧಿಗದಿಪರ್ತಂ
ತಂಮೊಳುಳ್ಕೊಳ್ವ
ನೊಲ್ದೀಯತಿಕ್ಕೆ ಕುಮಾರ
ಲಕ್ಷ್ಮ ರಥಿನೀನಾಥಂಗೆ
ಅತಿ ಪ್ರೀತಿಯಿಂ '' ಎಂಬ ಮಾತು ಬರುತ್ತದೆ.


ಶ್ರೀ ಉದ್ಧಾನ ಶಿವಯೋಗಿಗಳು

ಶ್ರೀಧರನು ಸಿರಿಯನ್ನು, ಬ್ರಹ್ಮನು ಆಯುಸ್ಸನ್ನು, ಗೌರೀವರನು ಕೀರ್ತಿಯನ್ನು, ಕಾಯಕ್ಕೆ ಒಪ್ಪುವಂತೆ ಚಂದ್ರನು ಬೆಳದಿಂಗಳ ತಣ್ಣನ ಕಾಂತಿಯನ್ನು ಸೂರ್ಯನು ತೇಜಸ್ಸನ್ನು ಅಷ್ಟದಿಕ್ಪಾಲಕರು ಎಂಟು ದಿಸೆಗಳಿಗೂ ಹರಡುವಂಥ ಶ್ರೇಯವನ್ನು ದಂಡನಾಯಕ ಕುಮಾರ ಲಕ್ಷ್ಮನಿಗೆ ಅತಿ ಪ್ರೀತಿಯಿಂದ ಕೊಡಲಿ ಎಂದು ಶಾಸನ ಕವಿ ಕಾವ್ಯದ ಕಸುವಿನಲ್ಲಿ ಅಂದಿನ ವರ್ತಮಾನದಲ್ಲಿ ಕುವರ ಲಕ್ಷ್ಮನ ಮೇಲೆ ಜನತೆಗಿದ್ದ ಆಶಯವನ್ನು ವ್ಯಕ್ತ ಮಾಡಿದ್ದಾನೆ. ಹೀಗೆಯೇ ಶ್ರೀಮದುದ್ದಾನ ಶಿವಯೋಗಿಗಳ ಶಿವ ಕುವರರಾಗಿ ಮೇಲಿನ ಎಲ್ಲ ಕಳೆಗಳೊಡನೆ ಜನತಾ ಶಂಭುವಿನಿಂದ ಮಾನಿತರಾಗಿ, ತ್ರಿವಿಧ ದಾಸೋಹ ಮೂರ್ತಿ ಪರಮಪೂಜ್ಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳು ನಮ್ಮ ನಡುವಣ ಕೇವಲ ಪವಾಡ ಪುರುಷರಲ್ಲ, ಲೀಲೆಯ ಹಂಗಿನವರಲ್ಲ, ವರ್ತಮಾನದ ಜೀವಂತ ಕಾಯಕ ವಿಜ್ಞಾನಿ.

೩-೩-೧೯೩೦ ರಂದು ಶ್ರೀಮದುದ್ದಾನ ಶಿವಯೋಗಿಗಳಂಥ ಗುರುಕಾರುಣ್ಯ ಪಡೆದು ಆಶ್ರಮ ಸ್ವೀಕಾರ ಮಾಡಿದ ಬಿ.ಎ. ಓದುತ್ತಿದ್ದ ಶಿವಣ್ಣನವರು 'ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಶಿವಕುಮಾರಸ್ವಾಮಿ' ಎಂಬ ಅಭಿಧಾನ ವರ್ಣಿತರಾದರು. ಮಠದ ಹೊಣೆ ಹೆಗಲೇರಿದರೂ, ಬಿ.ಎ. ಪರೀಕ್ಷೆ ಮುಗಿಸಿ, ಹಲವಾರು ವರ್ಷದ ಸಂಸ್ಕೃತಾಭ್ಯಾಸ ಮಾಡಿ ಪಾಂಡಿತ್ಯವನ್ನು ಗಳಿಸಿದರು. ನಮ್ಮ ಸಾಂಸ್ಕೃತಿಕ ಆಸ್ತಿಯನ್ನು ಜೋಪಾಸನೆ ಮಾಡಿದರು. ೧೯೪೧ರಲ್ಲಿ ಶ್ರೀ ಶಿವಯೋಗಿಗಳು ಲಿಂಗವಾದಾಗ ಈ ಶ್ರೀ ಪುರುಷನಲ್ಲಿ ಗುರುವಿನ ಕನಸುಗಳೆಲ್ಲ ನನಸಾಗತೊಡಗಿದುವು. ನಡೆದ ಹಾದಿಯಲ್ಲಿ ಸಹಜವಾಗಿ ಕಾಣಿಸಿಕೊಂಡ ಕೊರಕಲುಗಳನ್ನು ದಾಟಿ ಶ್ರೀ ಕ್ಷೇತ್ರವನ್ನು ಹೆಸರು, ಉಸಿರಿಗೆ ತಕ್ಕಂತೆ ಸಿದ್ಧಗಂಗಾ ಕ್ಷೇತ್ರವೆಂದು ಪ್ರಸಿದ್ಧಿಗೊಳಿಸಿದರು. ಕಾಯಕಕ್ಕೆ ಹೊಸ ಭಾಷ್ಯವನ್ನು ಸಾಕ್ಷಾತ್ಕರಿಸಿದರು. ಬರಿ ಮಾತು ಬರಹ ಮೀರಿದ ಬಳುಕಾದ ಚೈತನ್ಯಮಯ ಚಲನೆ ಇದು.

ವೇದಪಾಠಶಾಲೆ, ಸಂಸ್ಕೃತ ಕಾಲೇಜು, ಎಂಜಿನಿಯರಿಂಗ್ ಕಾಲೇಜು, ಸಾರ್ವತ್ರಿಕ ವಿದ್ಯಾರ್ಥಿ ನಿಲಯ, ತರಬೇತಿ






ಸಂಸ್ಕೃತ ಕಾಲೇಜು

ಕಾಲೇಜು, ಪ್ರೌಢಶಾಲೆ, ಮಾಧ್ಯಮಿಕ ಶಾಲೆ, ನರ್ಸರಿ ಶಾಲೆ, ಕುರುಡರ ಪಾಠಶಾಲೆ, ಯೋಗಾಭ್ಯಾಸ ತರಗತಿ ಹೀಗೆ ಪ್ರಾಚೀನ ಮತ್ತು ಅರ್ವಾಚೀನ ಸಾಂಸ್ಕೃತಿಕ ಆಸ್ತಿಯ ಸಾಮರಸ್ಯ ಸಾಧಿಸಿ ಆಧುನಿಕ ಮೌಲ್ಯವನ್ನು ಒದಗಿಸಿದ ದಾರ್ಶನಿಕ ಚೇತನ ಶ್ರೀಗಳವರದಾಗಿದೆ. ಇಂದಿಗೆ ಕಟ್ಟಿಸಿರುವ ದಾಸೋಹದ ಭವ್ಯ ನಿಲಯ ನೆಲೆಯೊಂದು ಪ್ರಸಾದದ ಗುಡಿ, ವಜ್ರ ಮಹೋತ್ಸವದ ಸ್ಮರಣ ಬೃಹತ್ ವಿದ್ಯಾರ್ಥಿ ಗೃಹವಂತು ಕಲಾತ್ಮಕ ವಾಸ್ತುವಿನ ಆವಿಷ್ಕಾರ, ಮುದದ ಸಿರಿನೆಲೆ. ಮಠಗಳಿಗೆ ಆಸರೆ ತಪ್ಪಿದಾಗ, ಪೋಷಣೆ ಮಾಡುವ ಮಾರ್ಗ ತೋರಿದರು. ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಸಂಸ್ಥೆಗಳನ್ನು ತೆರೆಯುವಲ್ಲಿ ಆದರ್ಶರಾದರು. ಕೊಡಗಿನ ತೊರೆನೂರು ಮಠದ ಶಾಖೆಯೊಂದನ್ನು ಪ್ರಾರ್ಥಿಸಿದಂತೆ, ತಮ್ಮ ಅಂಕಿತಕ್ಕೆ ಪಡೆದುಕೊಂಡು ಅದನ್ನು ಅಭಿವೃದ್ಧಿಗೊಳಿಸಿದರು. ಇಂಥ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಧಾರ್ಮಿಕ ಸಿರಿ ಸೇವೆಗಳು ನಿರಂತರವಾಗಿ ಅವರ ಬದುಕಿನಲ್ಲಿ ನಡೆದು ಬಂದಿವೆ. ನಿತ್ಯ ನಿಮಿತ್ತಗಳೆನಿಸಿವೆ. ಕನ್ನಡ ಸಾಹಿತ್ಯ ಸಮ್ಮೇಳನವಿರಬಹುದು, ಇತಿಹಾಸ ಸಮ್ಮೇಳನವಿರಬಹುದು, ಶಿಕ್ಷಕರ ಸಮ್ಮೇಳನವಿರ ಬಹುದು ಸರಿಯಾದ ಯಾವುದಕ್ಕೂ ಸೊಲ್ಲುಗೊಟ್ಟರು, ನೆರವು ಗೊಟ್ಟರು, ಛಾವಣಿ ಇಟ್ಟರು, ಕೈಂಕರ್ಯ ಬೆಳೆಸಿದರು, ದಾಸೋಹದ ಅರ್ಥವನ್ನು ಮನೆ ಮಾತಾಗಿಸಿದರು. ಭೇದವಿಲ್ಲದ ಏಕೋಭಾವದ ಅವಿಮುಕ್ತ ಕ್ಷೇತ್ರವನ್ನು ಸಾಧಿಸಿ ತೋರಿದರು. ಇದು ಅವರ ಪುರುಷೋತ್ತಮ ಆಕರ್ಷಕ ವ್ಯಕ್ತಿತ್ವ, ಶಿವಸಂಜಾತ ವ್ಯಕ್ತಿತ್ವ. ೧೯೮೧ರಲ್ಲಿ ನಡೆದ ಶ್ರೀಗಳು ಕ್ಷೇತ್ರಾಧ್ಯಕ್ಷರಾಗಿ ಐದು ದಶಕಗಳ ಸಂದ ಸಂದರ್ಭದಲ್ಲಿ ಸುವರ್ಣೋತ್ಸವಕ್ಕೆ ಹಳೆ ವಿದ್ಯಾರ್ಥಿ ಸಂಘವು ಹೊರತಂದ ೧೨೪೬ ಪುಟಗಳ ಬೃಹತ್ ಸಂಪುಟ 'ಸಿದ್ಧಗಂಗಾ ಶ್ರೀ' ಶ್ರೀಕ್ಷೇತ್ರದ ಸಾಂಸ್ಕೃತಿಕ ಸುವರ್ಣ ಸಾರಸ್ವತವಾದರೆ, ವಜ್ರಮಹೋತ್ಸವ ಸಂದರ್ಭದ 'ದಾಸೋಹಸಿರಿ' ಕನ್ನಡ ನಾಡಿನ ವೀರಶೈವ ಮಠಗಳ ಸಾಂಸ್ಕೃತಿಕ ವಿಸ್ತಾರ ಹಾಗು ಶ್ರೀಕ್ಷೇತ್ರದ ಸಾಧನೆಯ ಚಿತ್ತರದ ಪ್ರತೀಕ.

'ಸಿದ್ಧಗಂಗಾ' ಮಾಸಿಕದಲ್ಲಿ ಬರುವ ಅವರ ಶ್ರೀವಾಣಿ ಪ್ರಾರ್ಥನಾ ಸಭೆಯಲ್ಲಿ ಹಾಗೂ ವಿವಿಧ ಕಡೆಗಳಲ್ಲಿ ನೀಡುವ ಆಶೀರ್ವಚನದ ಸುವರ್ಣನುಡಿ ಸಿಂಚನಗಳಾಗಿವೆ. ಅವು ಅವರ ಅಂತರಾಳದ ಅನುಭವಾದ ಸೂಳ್ನುಡಿ, ಮಾತಿನ ಮಧುರ ಕಡಲು. ಅಂದರೆ ಆಡಿದ ಮಾತು ಹಿತವಾದದ್ದು, ಸವಿಯಾದದ್ದು, ಕಡಲಿನಂತೆ ವಿಶಾಲವಾದದ್ದು, ಬಿತ್ತರದ್ದು, ಎತ್ತರದ್ದು, ತತ್ತಳದ್ದು. ಶಿವನ-ಲಿಂಗಯ್ಯನ ಶ್ರೀಚರಣ


ನೂತನ ಪ್ರೌಢಶಾಲಾ ಕಟ್ಟಡ



ವಜ್ರಮಹೋತ್ಸವ ನೆನಪಿನ ವಿದ್ಯಾರ್ಥಿನಿಲಯ

ವಿಳಿದಾಳವನ್ನು ಕಾಣಬೇಕೆಂಬಥದ್ದು, ಶ್ರೀಮುಡಿಯ ಮೇರುವನ್ನು ತಲುಪಬೇಕೆನ್ನುವಂಥದ್ದು. ಅಗೋಚರ- ಅಗಮ್ಯ- ಅಪ್ರತಿಮ ಲಿಂಗದ ಸಾನ್ನಿಧ್ಯ ಸಾರೂಪ್ಯ, ಸಾಲೋಕ್ಯ ಸಾಧಿಸಬೇಕೆನ್ನುವಂಥ ಸದೈಕ್ಯಭಾವದ್ದು. ಇವೆಲ್ಲದರ ಜೊತೆಗೆ ಮರ್ತ್ಯದ ಮಣಿಹವನ್ನು, ಸಂಗತಿ ಸ್ವಾರಸ್ಯವನ್ನು ಮಗ್ನವಾಗಿಸಿ ಹೇಳುವ ಅವರ ಶ್ರೀವಾಣಿ ಪ್ರಾಚೀನ, ಅರ್ವಾಚೀನ, ತಾತ್ವಿಕ ದಾರ್ಶನಿಕ ನೋಟಗಳ ಸಮ್ಮಿಲನವೆನಿಸುತ್ತದೆ.

'ಧರ್ಮ ಮತ್ತು ಕಾಯಕ' ಕುರಿತ ಅವರ ಆಶೀರ್ವಚನ ವರ್ತಮಾನದ ವೈರುಧ್ಯಗಳಿಗೆ ಕೊಡುವ ಚಾಟಿ ಏಟಿನಂತಿದೆ. ವಾಸ್ತವತೆಯನ್ನು ವರ್ಣಿಸಿದೆ. ದರ್ಶನದ ಅರ್ಥ ಮೇಳೈಸಿರುವುದನ್ನು ಹೇಳಿದೆ. ''ಮನುಷ್ಯ'' ವಿಜ್ಞಾನದ ಸೌಲಭ್ಯಗಳನ್ನು ಲೋಕ ಕಲ್ಯಾಣಕ್ಕಾಗಿ ಬಳಸಿಕೊಳ್ಳಬೇಕೆ ಹೊರತು ಲೋಕ ಕಂಟಕಕ್ಕಾಗಿ ಅಲ್ಲ. ಶಕ್ತಿವಂತನಾಗಿರುವ ಮನುಷ್ಯ ತನ್ನ ಗುರಿ ಯುದ್ಧವೆಂದು, ಹಿಂಸೆಯೆಂದು, ರಕ್ತರಾತ್ರಿಯೆಂದು ತಿಳಿಯಬಾರದು. ಹಿಂಸೆ ಎಂದಿಗೂ ಪ್ರೀತಿಯನ್ನು ತರಲಾರದು. ಸ್ವಾತಂತ್ರ್ಯ ಬಂದ ಮೇಲೆ ರಾಷ್ಟ್ರ ಪ್ರವರ್ಧಿಸ ಬೇಕಾಗಿತ್ತು. ಆದರೆ ಜೀವನಾವಶ್ಯಕ ಸೌಲಭ್ಯವನ್ನೊದಗಿಸ ಲಾರದೆ ಭಾರತೀಯರು ನರಳುವಂತಾಗಿದೆ. ಅನ್ನ, ಬಟ್ಟೆ, ವಸತಿಯಂತಹ ಮೂಲಭೂತ ಸೌಕರ್ಯಗಳಿಲ್ಲದೆ ಅಸಂಖ್ಯಾತರಿದ್ದಾರೆ. ಅವರಿಗೆಲ್ಲ ನೆಮ್ಮದಿಯ ಜೀವ ಸೌಲಭ್ಯಗಳು ಲಭ್ಯವಾಗಬೇಕು. ಅದಕ್ಕಾಗಿ ಧರ್ಮಬೇಕು. ಆತ್ಮನಿಗೆ ಪ್ರತಿಕೂಲವಾದದ್ದನ್ನು ಮಾಡದಿರುವುದೇ 'ಧರ್ಮ' ಎಂದಿತು ಉಪನಿಷತ್ತು. ಧರ್ಮವೆಂದರೆ ಮನುಷ್ಯ ಮನುಷ್ಯನಾಗಿ ಬಾಳುವ ಮಾರ್ಗ. ಅದು ಯಾವುದೇ ಒಂದು ಜಾತಿಯ, ದೇಶದ ಸ್ವತ್ತಲ್ಲ. ಅರಿವಿರುವೆಡೆಯಲ್ಲಿ ಧರ್ಮ ಬೆಳೆಗುತ್ತದೆ, ಮರೆವಿರುವಲ್ಲಿ ಸಾಯುತ್ತದೆ..... ಮೈ, ಮಾತು, ಮನಸ್ಸುಗಳು ಪವಿತ್ರವಾಗಿರಬೇಕೆನ್ನುವ ಶೀಲಗಳು ಮನುಕುಲಕ್ಕೆ ಅಮೂಲ್ಯವಾದವುಗಳಲ್ಲವೆ ?.... ಹಣವುಳ್ಳವರಿಗೆ ಧರ್ಮ ಬುದ್ಧಿಬೇಕು (ಅದು ಇಲ್ಲದಾಗ) ಬಡವರ ನಿಟ್ಟುಸಿರುಗಳಿಸಿದ ಐಶ್ವರ್ಯವನ್ನುಸುಟ್ಟೀತು'' (೨.೧೨.೨೦೦೧).

ಈ ಮಾತುಗಳನ್ನು ಮೇಲುಕು ಹಾಕಿದರೆ, ಧರ್ಮದ ಅಂತರಂಗ, ವಿಜ್ಞಾನದ ಸಂಯಮ ಕಾಯಕದ ಬಗೆ, ಮನುಜನ ಹೊಣೆ ಇವೆಲ್ಲದರ ಕುರಿತ ವಾಸ್ತವಿಕ ವ್ಯಾಖ್ಯಾನ ಎನಿಸುತ್ತದೆ. ಇಲ್ಲಿ ಅನುಕಂಪ, ಕರುಣೆಯ ತೋರುನಡೆ ಬೇಡ, ಒಲುಮೆಯ ಅನ್ವಯಿತ ಕಾರ್ಯ ಅಗತ್ಯವಿದೆ, ಅದರಂತೆ ಆಚರಿಸಿ ತೋರಬೇಕು ಎಂಬ ಹದುಳ ಅವಸರವಿದೆ.

ದೆಹಲಿಯ ಸಂಸತ್ ಭವನದ ಮೇಲೆ ಭಯೋತ್ಪಾದಕ ಉಗ್ರರ ದಾಳಿಯನ್ನು ವಿಫಲಗೊಳಿಸಿದ ಭದ್ರತಾ ಪಡೆಯ ವೀರರ ಕುರಿತು 'ಸ್ಮರಣೀಯರು' ಎಂದಿರುವ ಅವರ ಆಶೀರ್ವಚನದ ವಾಣಿ ದೇಶ ಸೇವೆಯಲ್ಲಿ ಈಶ ಸೇವೆಯನ್ನು ಕಾಣುವ ಕಂಗಳ ಕಾಂತಿ ನುಡಿ ಎನಿಸುತ್ತದೆ. ಕವಿಯೊಳಗೆ ಕಿವಿ ಇಟ್ಟು ಕೇಳುವ, ಕಣ್ಣೊಳಗೆ ಕಣ್ಣಿಟ್ಟು ನೋಡುವ ಬಗೆ ಅದು. ಬದುಕಲು ಸಹಕರಿಸುವುದೇ ಧರ್ಮ, ಪ್ರೀತಿ ಅದರ ಜೀವಾಳ, ಇಂಥ ಸ್ವಾರ್ಥ ರಾಹಿತ್ಯ, ಶಿವನ ಸಾನ್ನಿಧ್ಯ ತರುತ್ತದೆ ಎಂದಿದ್ದಾರೆ. (೨೦.೧೨.೨೦೦೧) ಇಲ್ಲಿದೆ ಗುರುವಾಣಿ, ಗುರುವಿನ ಅಂತರಂಗದರ್ಶನ, ಸಾಮಾಜಿಕ ದೋಷಕ್ಕೆ, ಸಾಮಾಜಿಕ ರೇಜಿಗೆಗೆ ಗುರುವು ನೀಡಿರುವ ಪರಿಹಾರದ ಪ್ರಬಲವಾಣಿ ಸಬಲವಾದದ್ದು, ಸುಬಲವಾದದ್ದು.

ವಿದ್ಯೆ ಕಲಿಯಲು ದೃಢವಾದ ಮನಸ್ಸು ಬೇಕು (೧೪-೬-೨೦೦೧) ಎಂದು ಪ್ರಾರ್ಥನಾ ಸಭೆಯಲ್ಲಿ ನೀಡಿದ ಆಶೀರ್ವಚನದಲ್ಲಿ, ಐ.ಎ.ಎಸ್. ಪರೀಕ್ಷೆಯಲ್ಲಿ ಇಡೀ ರಾಷ್ಟ್ರಕ್ಕೆ ಮೊದಲಿಗಳಾಗಿ ಬಂದ ಕುಮಾರಿ ವಿಜಯಲಕ್ಷ್ಮಿ ಬಿದರಿಯವರ ಸಾಧನೆಯನ್ನು ಮಕ್ಕಳ ಮುಂದಿಟ್ಟು ಹೇಳಿರುವುದು ಕಲಿಕೆಯ ಪ್ರೇರಣೆಯನ್ನು ಪರಿಣಾಮಕಾರಿಯಾಗಿ ಸಂವಹನಿಸಿರುವ





ನುಡಿಶೀಲ ವಾಗಿದೆ. ವೃಷ್ಟಿ ಪ್ರತಿಭೆಯನ್ನು ಗುರುತಿಸಿ ವ್ಯಾಪಕಗೊಳಿಸುವ ಸಮಷ್ಟಿವಾಣಿ ಎನಿಸುವಂತಿದೆ. ಸೃಷ್ಟಿ ರೂಪಿಸಿದ ಜನ್ಮ, ಸಮಷ್ಟಿ ಸಾರ್ಥಕವಾಗುವ ಬಗೆ ಅದು.

ಬಡ್ಡಿ ವ್ಯವಹಾರ ಕುರಿತು ಅವರ ಸಾಮಾಜಿಕ ಕಳಕಳಿ ಪ್ರಕಟವಾಗಿರುವ ಬಗ್ಗೆ (ಮಾರ್ಚ್ ೨೦೦೨); ಬಡ್ಡಿ ಎಂಬುದು ಕೃತಜ್ಞತೆಯ ಕುರುಹಾಗಿಕೊಡುವ ದ್ರವ್ಯವಾಗಿರಬೇಕೇ ಹೊರತು ಪ್ರಾಣ ಹೀರುವ ಜಿಗುಣೆಯಾಗಬಾರದು ಎಂದಿರುವಲ್ಲಿ ಅದು ಗೋಚರವಿದೆ. 'ಮಾತು ಸುಂದರ ವಾಗಿರಬೇಕು' ಎಂದಿರುವ ಪ್ರಾರ್ಥನಾ ಸಭೆಯ ಆಶೀರ್ವಚನ ದಲ್ಲಿ (೮-೧೦-೨೦೦೧) ಬಸವಣ್ಣ ಅವರಲ್ಲಿ ಸಂವೇದನ ಗೊಳಿಸಿದ್ದಾನೆ ಎನ್ನಬೇಕು. ಅಲ್ಲದೆ, 'ಮಾತು ವೈಯಕ್ತಿಕ' ಸಿದ್ಧಿ, ಸಾಮಾಜಿಕ ಸ್ವಾಸ್ಥ್ಯಕ್ಕೆ ಹೆದ್ದಾರಿ, ಶೀಲದಿಂದ ಸಂಸ್ಕಾರ ಪಡೆಯುತ್ತದೆ. ಮಾತು ಮರ್ತ್ಯವನ್ನು ಗೆಲ್ಲುವ ಮೆಟ್ಟಿಲಾಗ ಬಹುದು. ಮಾತು ಮನುಷ್ಯ ವೃಕ್ಷದಲ್ಲಿ ಅರಳಿದ ಸುಂದರ ಹೂವು, ರಸಭರಿತ ಫಲ ಎಂದಿರುವ ಅವರ ನುಡಿ, ಮೇಲೆ ಮಾತಾಡಿರುವ ಬಗೆಗೆಲ್ಲದರ ಸುಂದರ ಪ್ರತಿನಿಧಿ ಎನಿಸುತ್ತದೆ. ಅವರಿಂದ ಮುನಿದ ಮಾತು ಬಂದರೆ ತಿದ್ದಿಕೊಳ್ಳಲು ಸೂಚಿಸುವ ಪ್ರೀತಿಯ ಆಗ್ರಹ; ನಲಿದ ಮಾತು ಬಂದರೆ ನಡೆದ ನಡೆ ಮತ್ತಷ್ಟು ಸೊಬಗಾಗಲಿ ಎಂಬ ಸದಾಶಯ, ಪ್ರೋತ್ಸಾಹ ಭಾಗ್ಯ.

ಹೀಗೆ, ಕಾಯಕ, ತ್ರಿವಿಧ, ದಾಸೋಹ, ವ್ಯಾವಹಾರಿಕ, ಲೌಕಿಕ, ಕೌಶಲ್ಯ ಇವೆಲ್ಲ ಅವರ ಶ್ರೀವಾಣಿಯ ಸಿರಿಗೋಪುರದ ಬೆಡಗಿನ . ಬೊಂಬೆಗಳಾಗಿವೆ. ಪಕ್ವವಾದ ವಯಸ್ಸು, ತೂಕವಾದ ಮಾತು, ಕ್ರಿಯೆಯ ಉತ್ಸಾಹ, ಮನುಜ ಮನಸ್ಸನ್ನು ತಿದ್ದಿ ತೀಡುವ ನೋವುಂಟು ಮಾಡದ ಬಗೆ, ಇವೆಲ್ಲ ಅವರದೇ ವೈಶಿಷ್ಟ್ಯ, ಸಿದ್ಧಗಂಗೆಗೆ ತೆರೆದ ಅದೃಷ್ಟ.

> ಕನ್ನಡ ನಾಡಿನ ಹೆಮ್ಮೆಯ ಪೀಠಾಧಿಪತಿಗಳೆನಿಸಿದ ಶ್ರೀ ಶಿವಕುಮಾರಸ್ವಾಮಿಗಳು ಸಿದ್ಧಗಂಗೆಯಿಂದ ವಿದ್ಯೆಯ ಶುದ್ಧಗಂಗೆಯನ್ನೇ ನಾಡಿನಲ್ಲಿ ಹರಿಸಿದ್ದಾರೆ.
>
> - ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಸ್ವಾಮೀಜೀ

## ಶ್ರೀ ಸಿದ್ಧಗಂಗಾ ಸುಪ್ರಭಾತ

ಮೆರೆವೆ ಜಂಗಮ ಜ್ಯೋತಿ ಶಿವಕುಮಾರಯತಿ<br>
ಕರುನಾಡ ಸತ್ಕೀರ್ತಿ, ಭಾರತ ವಿಭೂತಿ ।<br>
ಸರುವ ಜೀವಾತ್ಮರಿಗೆ ಲೇಸನೆಸಗುವ ಪ್ರೀತಿ<br>
ತಿರು ಸಿದ್ಧಗಂಗೆಯಾ ಪಂಚಾರತಿ ॥

ನಿನ್ನ ಮುನ್ನಿನ ಮಹಿಮೆ ತಪವಾಂತು ಪದೆಯೆ ಈ<br>
ಪೂರ್ಣ ಶಿವಯೋಗಿಯನು ಬೆಳಕಾಯಿತು ।<br>
ಧನ್ಯೆ ನೀ, ಧನ್ಯೆ ನೀ ಸಿದ್ಧಗಂಗಾ ಶ್ರೀಯೆ<br>
ಇನ್ನೇಕೆ ನಿದ್ರೆ ? ತೊರೆ ಬೆಳಗಾಯಿತು ॥

ಸಿದ್ಧಿ ಶ್ರೀಗಿರಿಯೇರಿ ಬಿದ್ದವರ ಉದ್ಧರಿಸಿ<br>
ವಿದ್ಯೆಯ ಪ್ರಸಾರಕ್ಕೆ ಲಕ್ಷಮುಖ ನೀಡಿ ।<br>
ಇದ್ದ ಕಾರ್ಯಕ್ಷೇತ್ರ ನೂರುಮಡಿ ವಿಸ್ತರಿಸಿ<br>
ಸದ್ಧರ್ಮ ಸಾರವನು ಸೂರೆಮಾಡಿ ॥

ಬಹುಮುಖದ ವ್ಯಕ್ತಿತ್ವ ಬಹುಕಾರ್ಯ ಕರ್ತೃತ್ವ<br>
ಬಹುಮುಖದ ಪಾಂಡಿತ್ಯ, ಪ್ರವಚನ ಪಟುತ್ವ-<br>
ಬಹುವಿರಳವಿಂತಹ ಸಮಗ್ರತ್ವ ಸೃಷ್ಟಿಯಲಿ<br>
ಇಹ ಪರದ ಏಕತ್ವವಿಲ್ಲಿ ನಿಜ ತತ್ತ್ವ ॥

ಇನ್ನೆಲ್ಲಿ ಕಾಣುವುದು ಇಂಥವನ ಬಾಳಿಗೇ<br>
ಕಣ್ಣಾದ ಶಿವಯೋಗ ಸಾಮ್ರಾಟನ ?<br>
ಧನ್ಯವೀ ಶತಮಾನ, ಧನ್ಯ ಭಾರತ ಭೂಮಿ<br>
ಧನ್ಯ ಕರ್ನಾಟಕದ ಸಕಲ ಜನ ॥

ಮಂಗಲವು ಸರ್ವಮತ ಜಾತಿಗಳ ಸಂಗಮಕೆ<br>
ಮಂಗಲವು ಸಿದ್ಧಗಂಗಾ ಕ್ಷೇತ್ರಕೆ ।<br>
ಮಂಗಲವು ಶಿವಕುವರ ಶಿವಯೋಗಿ ಪುಂಗವಗೆ<br>
ಮಂಗಲವು ಜೀವಕುಲ ಸರ್ವತ್ರಕೆ ॥

ಜಂಗಮ ಚೈತನ್ಯವು ರಿಂಗಣ ಗುಣಿವ ವಿ-<br>
ಹಂಗಮ ಸ್ವರನಾಗೆ ಬೆಳಗಾಯಿತು !<br>
ಮಂಗಲದ ಮನೆ ಸಿದ್ಧಗಂಗಾ ಶ್ರೀ ಜನ-<br>
ಜಂಗುಳಿಯ ಪೊರೆ ಏಳು ಬೆಳಗಾಯಿತು

- ಡಾ॥ ಸಿದ್ಧಯ್ಯ ಪುರಾಣಿಕ



# ಸಿದ್ಧಗಂಗೆಯ ಬೆಳಕು

ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ
'ಲಲಿತಾಕೃಪಾ', 203, 7ನೇ 'ಎ' ಮೈನ್
ವಿಜಯನಗರ 2ನೇ ಹಂತ, ಬೆಂಗಳೂರು-560 004



ಸಿದ್ದಗಂಗೆಯ ಬೆಳಕು ಎಂದೇ ಖ್ಯಾತರಾಗಿರುವ ನಮ್ಮ ನಡುವೆ ಸುಳಿದಾಡುವ ಅಣ್ಣನಂತಿರುವ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಈಗ ೯೩ ವರ್ಷಗಳೆಂದರೆ ನಂಬಿಕೆ ಬಾರದು. ಹೀಗೆ ನಂಬಲಾರದಂಥದನ್ನೆ ಪವಾಡ ಎನ್ನುವುದುಂಟು. ಅಂಥ ಪವಾಡದಂತೆ ಬದುಕುತ್ತಿರುವ ಪೂಜ್ಯ ಸ್ವಾಮೀಜಿಯವರಿಗೆ ೭-೪-೨೦೦೨ ರಂದು ಸಿದ್ಧಗಂಗೆಯಲ್ಲಿ 'ಗುರುವಂದನೆ' ಮಾಡಿ ಹೆಮ್ಮೆಪಡುವ ಕಾರ್ಯಕ್ರಮ ಯೋಜಿತವಾಗಿದೆ.

ಅವರು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳ ಪಟ್ಟಿ, ಅಲ್ಲಿ ಪ್ರಾಪ್ತವಾಗಿರುವ ಉದ್ಯೋಗಾವಕಾಶಗಳು ಹಾಗೂ ಜ್ಞಾನದಾಸೋಹ, ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಉಚಿತ ಊಟ ವಸತಿಗಳ ವ್ಯವಸ್ಥೆ, ದಿನ ದಿನವೂ ಮಠಕ್ಕೆ ಬರುವ ಅತಿಥಿ ಅಭ್ಯಾಸ ನಂತರ ದಾಸೋಹ ಸಮೃದ್ಧಿ, ಭಕ್ತಾದಿಗಳ ಸಂಖ್ಯೆ, ಕರ್ನಾಟಕದ ಮೂಲೆ ಮೂಲೆಗಳಿಂದ ಆಶ್ರಯ ಬಯಸಿ ಬಂದಿರುವ ಸಮಾಜದ ವಿವಿಧ ಶ್ರೇಣಿಗಳ ವಿದ್ಯಾರ್ಥಿಗಳ ವಿವಿಧತೆ ಹಾಗೂ ಸಂಖ್ಯೆಗಳನ್ನು ನೀಡಿ ನಿಮ್ಮ ಕಾಲಹರಣ ಮಾಡಲು ಇಷ್ಟಪಡುವುದಿಲ್ಲ. ಇಂದಿಗೆ ಎರಡು ವರ್ಷಗಳಿಗೆ ಹಿಂದೆಯೇ ೪೦೦೦ ಜನ ಒಂದೇ ಸಲಕ್ಕೆ ಊಟಕ್ಕೆ ಕೂತು ಊಟ ಮಾಡುವ ದಾಸೋಹ ಭವನ, ೧೫೦೦ ವಿದ್ಯಾರ್ಥಿಗಳಿಗೆ ವಸತಿ ಒದಗಿಸುವ ವಸತಿ ಗೃಹ ಸಜ್ಜಾಗಿ ಸೇವೆ ಸಲ್ಲಿಸುತ್ತಿವೆ. ಈಗ ನರ್ಸಿಂಗ್ ಕಾಲೇಜು ನೂತನ ಕಟ್ಟಡ ನಿರ್ಮಾಣಗೊಂಡು ಸೇವೆಗೆ ಸಿದ್ಧವಾಗಿದೆ. ಆಧುನಿಕ ಸೌಲಭ್ಯಗಳನ್ನು ಒಳಗೊಂಡ ಆಸ್ಪತ್ರೆ ಸಿದ್ಧಗೊಳ್ಳುತ್ತಾ ಇದೆ. ಈ ಸಂದರ್ಭದಲ್ಲಿ ಎರಡು ವರ್ಷಗಳ ಹಿಂದೆ ನಡೆದ ಗುರುವಂದನ ಕಾರ್ಯಕ್ರಮದಲ್ಲಿ ಪರಮ ಪೂಜ್ಯ ಶ್ರೀಗಳವರು ಆಡಿದ ಮಾತುಗಳನ್ನು ಹಲವು ನನ್ನ ಮನಸ್ಸಿನಲ್ಲಿ ಇನ್ನೂ ಹಸಿರಾಗಿವೆ. ಆ ನೆನಪನ್ನು ನಿಮ್ಮ ಮುಂದೆ ಬಿಚ್ಚಿ ಇಡುತ್ತೇನೆ.







ದಾಸೋಹ ಮಂದಿರ

ಇಪ್ಪತ್ತೊಂದನೆಯ ಶತಮಾನದ ಹೊಸ್ತಿಲಲ್ಲಿ ಗುರುವಂದನೆ ಕಾರ್ಯಕ್ರಮ ಏರ್ಪಾಡಾಗಿತ್ತು, ಸಿದ್ಧಗಂಗೆಯಲ್ಲಿ. ಆ ಸಮಾರಂಭಕ್ಕೆ ವಿಶೇಷ ಅರ್ಥವಿತ್ತು. ಏಕೆಂದರೆ ಗುರುವಂದನೆಗಾಗಿ ಶಿಷ್ಯಕೋಟಿ ನಿಧಿ ಒಪ್ಪಿಸಬೇಕಾಗಿರಲಿಲ್ಲ. ನಿರಾಭಾರಿಗೆ ನಿಧಿ ಅಗತ್ಯವಿದೆಯೆ ?

ದಾನಿಗಳು, ಶಿಷ್ಯರು ಮತ್ತು ಅಭಿಮಾನಿಗಳು ಗುರುವಂದನೆಯ ನೆಪದಲ್ಲಿ ಎರಡು ಮಹತ್ತರವಾದ ಕಾರ್ಯ ಮಾಡಿದ್ದರು.

ಒಂದನೆಯದು, ದಾಸೋಹ ಭವನ ನಿರ್ಮಾಣ, ಅತ್ಯಾಧುನಿಕವಾಗಿ ಸಜ್ಜುಗೊಂಡಿರುವ ವೈಜ್ಞಾನಿಕವಾಗಿ ಅಡುಗೆಯ ಕೋಣೆ, ಸುಸಜ್ಜಿತವಾದ ಉಪಕರಣಗಳು ಮತ್ತು ದಾಸೋಹ ಮಠ ಎಂದೇ ಖ್ಯಾತವಾಗಿರುವ ದಾಸೋಹ ಮಂದಿರ.

ವಾಸ್ತವವಾಗಿ ಸಿದ್ಧಗಂಗೆಯ ಹಿಂದಿನ ಗುರುಗಳು ಪೂಜ್ಯ ಉದ್ದಾನೇಶ್ವರರು ದಾಸೋಹಕ್ಕಾಗಿ ಹೊತ್ತಿಸಿದ ಒಲೆಯ ಬೆಂಕಿ ಇಂದಿಗೂ ಆರಿಲ್ಲಾ; ಆರಕೂಡದು. ಅಂಥ ದಾಸೋಹ ಸೇವೆಯನ್ನು ನಿರಂತರವಾಗಿ ನಡೆಸುವ ದಾಸೋಹ ಮಂದಿರವನ್ನು ಸುಸಜ್ಜಿತಗೊಳಿಸಿ ಗುರುಗಳಿಗೆ ಅರ್ಪಿಸಿದರು - ಅಲ್ಲ ಸಮಾಜಕ್ಕೆ ಅರ್ಪಿಸಿದರು. ಅದಕ್ಕಾಗಿಯೇ ಸಿದ್ಧಗಂಗೆಯ ಬೆಳಕಾಗಿ ಹೋಗಿರುವ ಡಾ. ಶ್ರೀ ಶಿವಕುಮಾರ ಸ್ವಾಮಿಗಳು 'ಗುರುವಂದನೆ'ಗೆ ಒಪ್ಪಿದರು.

ಎರಡನೆಯದು, ಬರಿಯ ದಾಸೋಹ ಭವನ ಆದರೆ ಸಾಕೆ ? ಅಲ್ಲಿ ದಾಸೋಹ ಸೌಲಭ್ಯ ಪಡೆಯುವವರಲ್ಲಿ ಸಾರ್ವಜನಿಕರೂ, ಅತಿಥಿ ಅಭ್ಯಾಗತರೂ, ಯಾತ್ರಾರ್ಥಿಗಳೂ ಇರುತ್ತಾರೆನ್ನುವುದು ಬೇರೆ ವಿಷಯ. ಅಲ್ಲದೆ ಶಿಕ್ಷಣಾನುಕೂಲಗಳಿಗಾಗಿ ಕರ್ನಾಟಕದ ಮೂಲೆ ಮೂಲೆಗಳಿಂದ ಬಡ ವಿದ್ಯಾರ್ಥಿಗಳಿಗೆ ನೆಲೆಯಾಗುವ ಸೂರೊಂದು ಇರಬೇಕು, ಅಲ್ಲವೇ? ಅದಕ್ಕಾಗಿಯೆ ಭವ್ಯವಾದ ವಸತಿ ನಿಲಯವನ್ನೂ ಆಕರ್ಷಕವಾದ ಶಿಲ್ಪದಿಂದ ಕೂಡಿರುವ ಸುಸಜ್ಜಿತ ವಸತಿ ನಿಲಯವನ್ನು ಅರ್ಪಿಸಿದರು.

೯೩ ವರ್ಷದ ಸುದೀರ್ಘ ಸೇವೆ ಮತ್ತು ತಪಸ್ಸುಗಳ ಸ್ವಾಮೀಜಿಯವರ ಮುಖ ಪ್ರಶಾಂತ ನಿರ್ಮಲವಾಗಿತ್ತು. ಗೊನೆಬಿಟ್ಟ ಬಾಳೆಯ ಹಾಗೆ ಸ್ವಾಮೀಜಿಯವರ ಬೆನ್ನು ತುಸುವೇ ಬಾಗಿತ್ತು. ಆರವತ್ತರದ ವ್ಯಕ್ತಿ ಒಂದು ಕ್ಷಣ ಮೌನವಾದರು ಮಠದ ಇತಿಹಾಸ, ಏಕೆ ಆವರೆಗೆ ನಡೆದುದಲ್ಲಿ ಅವರ ಕಣ್ಣೆದುರು ಹಾದು ಹೋಗಿರಬೇಕು, ಚಲನಚಿತ್ರದ ಹಾಗೆ.

ಅನಂತರ ಅವರು ಹೇಳಿದ್ದೇನು, ಗೊತ್ತೆ ? ಈ ಉತ್ಸವದ ಅಗತ್ಯ ಇತ್ತೆ ? ಎಂದು ತನಗೆ ತಾನೆ ಪ್ರಶ್ನೆ ಹಾಕಿಕೊಂಡರು.

ಎರಡನೆ ಪ್ರಶ್ನೆ ಅವರದು - ನನ್ನೊಳಗಿನ ಶಿವ ಪ್ರಶ್ನಿಸುತ್ತಾನೆ - ಏನು ಮಾಡಿದ್ದಿ ನೀನು ?

ಅದಕ್ಕೆ ಅವರೇ ಉತ್ತರ ಕೊಡುವ ಹಾಗೆ ಮುಂದುವರೆದರು, ಇಷ್ಟೆಲ್ಲಾ ದಾನಿಗಳು ಮತ್ತು ಅಭಿಮಾನಿ ಭಕ್ತರು ಹೃದಯವನ್ನು ಗೆದ್ದಿರುವ ಮಠದ ಮಹಿಮೆ ದೊಡ್ಡದು. ಎಷ್ಟೋ ಜನ ಖಾಲಿ ಚೆಕ್ಕುಗಳಿಗೆ ರುಜು ಮಾಡಿ ನಿಮಗೆಷ್ಟು ಹಣ ಬೇಕು ಬರೆದುಕೊಳ್ಳಿ ಎಂದು ಔದಾರ್ಯ ಪ್ರಕಟಿಸಿದ್ದಾರೆ, ಅವರ ಔದಾರ್ಯಕ್ಕೆ ಸಿದ್ಧಲಿಂಗೇಶ್ವರನ ಆಶೀರ್ವಾದ ಇರಲಿ ಎನ್ನುತ್ತೇನೆ.

ಎಲ್ಲರೂ ನನ್ನನ್ನು ಒಂದು ಪ್ರಶ್ನೆ ಕೇಳುತ್ತಾರೆ - ಸ್ವಾಮೀಜಿ, ಇಷ್ಟೊಂದು ದಾಸೋಹ ನಿರಂತರವಾಗಿ ನಡೆಯುತ್ತಿದೆಯಲ್ಲ, ಹೇಗೆ? ಎಂದು. ನಾನು ಆ ಪ್ರಶ್ನೆಗೆ ಸರಳ ಉತ್ತರ ಕಂಡು ಕೊಂಡಿದ್ದೇನೆ.

ಮಠದ ಪೀಠದಲ್ಲಿ ನನ್ನನ್ನು ಕುಳ್ಳಿರಿಸಿದಾಗ ಈ ಜವಾಬ್ದಾರಿಯ ಬಗೆಗೆ ದಿಗಿಲುಗೊಂಡಿದ್ದ ನನ್ನನ್ನು ಧೈರ್ಯಗೊಳ್ಳುವಂತೆ ಮಾಡಿದ್ದೇನು, ಗೊತ್ತೆ ?

ಇಂದು ಲಕ್ಷ ಲಕ್ಷ ರೂಪಾಯಿಗಳ ದಾನ ಮಾಡಿದವರಿದ್ದಾರೆ - ಮುಂದೂ ಇರುತ್ತಾರೆ - ಆದರೆ ಬರಿಯ ಇಂಥ ಶ್ರೀಮಂತರ ದೇಣಿಗೆ ಒಂದೇ ಅಲ್ಲಾ ದಾಸೋಹಕ್ಕೆ ನೆರವಾದುದು !

ಅಂದು ನಮ್ಮ ಗುರುಗಳು ಹೊತ್ತಿಸಿ ದಾಸೋಹದ ಒಲೆಯ ಬೆಂಕಿ ಇಂದಿಗೂ ಆರದಂತೆ ನೋಡಿ ಕೊಂಡಿರುವವರು ಯಾರು ಎಂದು ಗಮನಿಸ ಹೋದಾಗ ನನ್ನ ಹೃದಯ ತುಂಬಿ ಬರುತ್ತದೆ. ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತದೆ - ಮಠಕ್ಕೆ ಬಂದ ಒಬ್ಬ ಬಡ ರೈತ ತನ್ನ ಮಡದಿಯೊಂದಿಗೆ ಬಂದವನು ಬರಿಯ ಕೈಯಲ್ಲಿ ಬಂದು ಹೋಗಿಲ್ಲಾ. ಬೆವರು ಸುರಿಸಿ ತಾನು ಬೆಳೆದ ಹಸಿರು ಮೆಣಸಿನಕಾಯಿನ್ನು, ತನ್ನ ಪಂಚೆಯ ಸೆರಗಿನಲ್ಲಿ ಕಟ್ಟಿತಂದು ಉಗ್ರಾಣದಲ್ಲಿ ಸುರಿದು ಹೋಗಿದ್ದಾನೆ. ಇನ್ನೊಬ್ಬ ಹಿತ್ತಲಲ್ಲಿ ಬೆಳೆದ ಕುಂಬಳಕಾಯಿಯನ್ನು ಹಲಸಿನ ಕಾಯನ್ನೂ ತಲೆಯ ಮೇಲೆ ಹೊತ್ತು ತಂದು ಉಗ್ರಾಣವನ್ನು ತುಂಬಿದ್ದಾನೆ. ಹೀಗೆ ಅಳಿಲು ಸೇವೆಯೆಂದು ಉಗ್ರಾಣ ತುಂಬಿದ್ದಾನೆ. ಉರಿಯುವ ಒಲೆಗೆ ಸೌದೆಯ ತುಂಡು ತಂದವರೆಷ್ಟೋ ಜನರೋ ! ಹೀಗೆ ತಾವು ತಂದುದನ್ನು ಮಠಕ್ಕೊಪ್ಪಿಸಿ ದಾಸೋಹ ಸ್ವೀಕರಿಸಿದ್ದನ್ನು ಕಂಡಿದ್ದೇನೆ, ಇಂಥ ದೀನರು ಎನ್ನುವ ಜನರ ಪ್ರೀತಿ ಅಭಿಮಾನ ಭಕ್ತಿಗಳ ಅಕ್ಷಯ ಪಾತ್ರೆಯಿಂದ ಇಲ್ಲಿನ ದಾಸೋಹ ನಡೆಯುತ್ತ ಬಂದಿದೆ. ಈ ಅಕ್ಷಯಪಾತ್ರೆಗೆ ನೆರವಾದ ಕೈಗಳು ಎಷ್ಟೋ, ಎಂಥೆಂಥವೋ!

ಸಿದ್ಧಲಿಂಗೇಶ ಹೀಗೇ ನಡಸಲಿ. ಎಲ್ಲಿಯವರೆಗೆ ದೇಶದಲ್ಲಿ ಹಸಿವು ಇಂಗದೊ ಅಲ್ಲಿಯವರೆಗೆ ನೆಮ್ಮದಿ ಇರದು. ಈ ಹಸಿವು ಹೊಟ್ಟೆಯದು ಮಾತ್ರ ಅಲ್ಲ - ಹೃದಯದ ಹಸಿವು, ಬುದ್ಧಿಯ ಹಸಿವುಗಳೂ ಇವೆ. ಅವುಗಳನ್ನು ನಶಿಸುವ ಕೈಂಕರ್ಯ ಮಾಡುವ ಸಂಕಲ್ಪ ಇಂಥ ಸಂದರ್ಭದಲ್ಲಿ ಇನ್ನಷ್ಟು ದೃಢಗೊಳ್ಳುತ್ತದೆ.

ಎಲ್ಲ ಧರ್ಮಗಳೂ ಹೇಳುವುದು - ಈ ಹಸಿವುಗಳು ಕಳೆಯಿರಿ, ಜಗತ್ತು ನೆಮ್ಮದಿಗೊಳ್ಳಲಿ ಎಂದು.

ಎಲ್ಲ ಹಸಿವುಗಳೂ ತೀರಿದ ಮೇಲೆ ಆತ್ಮದ ಹಸಿವಿದೆಯಲ್ಲ- ಅದು ಅದೂತಣಿಯುವಂತಾಗಲಿ ಎಂದು ಹಾರೈಸುತ್ತ ಕೃತಜ್ಞತೆ ಅರ್ಪಿಸಿ ಮಾತಿಗೆ ವಿರಾಮ ನೀಡುತ್ತೇನೆ.

*ಶ್ರೀಗಳವರು ಶಿಕ್ಷಣ ಕ್ಷೇತ್ರದಲ್ಲಿ ಹೊಸ ಮನ್ವಂತರವನ್ನೇ ಸೃಷ್ಟಿಸಿದ ಮಹಾಂತರು. ನಾಡಿನ ಮಕ್ಕಳಿಗೆ ಅವರಿವರೆನ್ನದೆ, ಸಾಮೂಹಿಕ ದೃಷ್ಟಿಯಿಂದ, ಅಕ್ಷರ ವಿದ್ಯೆಯೊಂದಿಗೆ ಒಳ್ಳೆಯ ನಡೆನುಡಿಗಳ ಉತ್ತಮ ಸಂಸ್ಕಾರವನ್ನು ನಿತ್ಯದ ಪ್ರವಚನಗಳ ಮೂಲಕ ನೀಡುತ್ತಿರುವುದು ಅನ್ಯಾದೃಶವೆನಿಸಿದೆ. ಸುಸಂಸ್ಕೃತ ಆತ್ಮಬಲವಂತ ಸದಾಚಾರಿ ತರುಣ ಪೀಳಿಗೆಯಿಂದಲೇ ಮಹಾನಾಡಿನ ಭವಿಷ್ಯ ಉಜ್ವಲವಾದೀತೆಂದು ಬಗೆದ ಶ್ರೀಗಳವರು ಈ ದಿಶೆಯಲ್ಲಿ ಧಾರ್ಮಿಕ ಗುರುಗಳಿಗೆ ಹೊಸ ಪದ್ಧತಿಯನ್ನು ತೋರಿದ ಮಹನೀಯ ಶಿವಯೋಗಿಗಳು.*

*ನಿರ್ಮಲಾಂತಃಕರಣರೂ, ನಿರಂಜನಮೂರ್ತಿಗಳೂ, ಸಿದ್ಧಗಂಗೆಯ ಸಿದ್ಧಪುರುಷರೂ ಆದ ಡಾ|| ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀಕ್ಷೇತ್ರದ ಸೇವಾಕ್ಷೇತ್ರಗಳನ್ನು ಎಲ್ಲ ಕಡೆಗೂ ವಿಸ್ತರಿಸುತ್ತಾ ವಿಶ್ವ ಧರ್ಮದ ಏಳ್ಗೆಗಾಗಿ ಸಮಸ್ತ ಮಾನವ ಜನಾಂಗದ ನೆಮ್ಮದಿಯ ಬಾಳ್ವೆಗಾಗಿ ನಿಸ್ವಾರ್ಥಭಾವದಿಂದ ಅವಿಶ್ರಾಂತವಾಗಿ ಅಹರ್ನಿಶಿ ಶ್ರಮಿಸುತ್ತಿರುವುದು ತುಂಬಾ ಶ್ಲಾಘನೀಯವಾಗಿದೆ. ಲಿಂಗ ಪೂಜಾ ತಪೋನಿಷ್ಠರೂ, ಶರಣ ತತ್ವಾನುಷ್ಠಾನಗರಿಷ್ಠರೂ, ತ್ರಿವಿಧ ದಾಸೋಹಿಗಳೂ ಆದ ಶ್ರೀಗಳವರು ಲಿಂಗದ ನಡೆ ಅಂಗದ ನುಡಿಗಳುಳ್ಳವರಾಗಿ ತಮ್ಮ ಸುದೀರ್ಘ ಆಯುಷ್ಯವನ್ನು, ಅಚಲ ತಪಶ್ಶಕ್ತಿಯನ್ನು ಮನುಕುಲದ ಉದ್ಧಾರಕ್ಕಾಗಿ ಧಾರೆಯೆರೆಯುತ್ತಿರುವುದು ಹರ್ಷದಾಯಕವಾಗಿದೆ.*

*– ಜಗದ್ಗುರು ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು, ಸುತ್ತೂರು*







# ಅಪ್ರಮೇಯ ಕರುಣಾಸಿಂಧು ಸಿದ್ಧಗಂಗೆಯ ವಿಭು

**ಟಿ.ಆರ್. ಮಹಾದೇವಯ್ಯ**
೮, ಕೆ.ಎಚ್.ಬಿ. ಕಾಲೋನಿ, ಕೃಷ್ಣಾನಂದನಗರ
ನಂದಿನಿ ಬಡಾವಣೆ, ಬೆಂಗಳೂರು-೮೬

ಶ್ರೀ ಸಿದ್ಧಗಂಗೆಯ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ಕುರಿತು ಬರೆಯುವುದು; ಅವರ ಲೋಕ ಕಾರುಣ್ಯವನ್ನು ಬಡವರು, ದೀನ ದಲಿತರ ಬಗೆಗಿನ ಅವರ ಮಿಡಿತ-ದುಡಿತಗಳನ್ನು ವರದಿ ಮಾಡುವುದು ಸುಲಭದ ಕೆಲಸವಲ್ಲ. ಅವರ ಅಮಳ ವ್ಯಕ್ತಿತ್ವದ ಓಜಸ್ವಿಯಾದ ಹಲವು ಮುಖಗಳು; ವೈವಿಧ್ಯಪೂರ್ಣವೂ, ಸಹಸ್ರಮುಖಿಯೂ ಆದ ಅವರ ಸೇವಾ ಕಾರ್ಯಗಳು ಮಾತಿಗೆ ನಿಲುಕದವು; ಗಣನೆಗೆ ದಕ್ಕವವು. ಅವು ಅಕ್ಷರಗಳ ಕಕ್ಷೆಗೆ ಸೀಮಿತಗೊಳ್ಳದ ವಿರಾಟ್ ಸ್ವರೂಪದವು.

ಹಿಮಾಲಯದ ಬಳಿ ನಿಂತು ಅದರ ಪರ್ವತ ಶ್ರೇಣಿಯ ಉತ್ತುಂಗ ಶೃಂಗಗಳನ್ನು ಎಣಿಸಿ ದಾಖಲಿಸುತ್ತೇನೆಂದು ಹೊರಟ ಸಾಹಸಿಯ ಪಾಡೇ ಶ್ರೀಗಳವರ ಬಗ್ಗೆ ಬರೆಯುವೆನೆಂಬುವನಿಗೆ ಆದರೆ ಆಶ್ಚರ್ಯವಿಲ್ಲ. ಒಂದು ಕಡೆಯ ಸಾಲುಗೊಂಡ ಶೃಂಗಗಳನ್ನು ಎಣಿಸಿ ಮುಗಿಸುವಷ್ಟರಲ್ಲಿ, ಮಂಜು ಪಕ್ಕಕ್ಕೆ ಸರಿದು ಮತ್ತಷ್ಟು ಹೊಸ ಶೃಂಗಗಳು ಕಾಣಿಸುತ್ತವೆ. ಅದನ್ನು ಪಟ್ಟಿಮಾಡುವಷ್ಟರಲ್ಲಿ ಇನ್ನೊಂದು ಕಡೆ ಇನ್ನೂ ಎತ್ತರದ ಶೃಂಗಶ್ರೇಣಿ ಗೋಚರಿಸಿ ಎಣಿಕೆಹಾರನನ್ನು ತಬ್ಬಿಬ್ಬುಗೊಳಿಸುತ್ತವೆ. ಅದರಂತೆ ಪೂಜ್ಯರ ದಿವ್ಯವ್ಯಕ್ತಿತ್ವದ ವಿವಿಧ ಮುಖಗಳನ್ನು, ಅವರ ಕಾರ್ಯಕ್ಷೇತ್ರದ ವಿಸ್ತಾರ, ವೈವಿಧ್ಯತೆಗಳನ್ನು ಬರವಣಿಗೆಯಲ್ಲಿ ಹಿಡಿದಿಡುತ್ತೇನೆಂಬವಗೆ ಅಂಥದೇ ಅನುಭವ !

ಅಂಥ ಅಸಹಾಯಕ ಸನ್ನಿವೇಶಗಳಿಂದಲೇ ಅಮೇಯ ಅಳೆಯಲಾಗದ್ದು, ಅನಿರ್ವಚನೀಯ ಮಾತಿನಲ್ಲಿ ಹೇಳಿ ಮುಗಿಸಲಾಗದ್ದು, ಅನುಪಮ, ಉಪಮಾತೀತ, ಹೋಲಿಸಲಾಗದ್ದು, ಹೋಲಿಕೆಗೆ ನಿಲುಕದ್ದು ಎಂಬ ಪದಗಳು ಹುಟ್ಟಿಕೊಂಡದ್ದು ! ಒಂದನ್ನು ಇನ್ನೊಂದಕ್ಕೆ ಹೋಲಿಸಿ ಸಾಕಾರಗೊಳಿಸುವ ರೀತಿಯುಂಟು. ಪರಿಚಿತ ವಸ್ತುವಿನಿಂದ ಅಪರಿಚಿತ ವಿಷಯವನ್ನು ಮನಗಾಣಿಸುವ ಶಿಕ್ಷಣ ಪದ್ಧತಿಯೊಂದಿಗೆ. ಆದರೆ ಕೆಲವು ಅಪೂರ್ವ ಪ್ರಸಂಗಗಳಲ್ಲಿ ಆ ತಂತ್ರವೂ ಸಹ ಸಾಧ್ಯವಾಗುವುದಿಲ್ಲ.

ಹೋಲಿಸುವ ಸಮಾನ ವಸ್ತುಗಳೇ ಸಿಕ್ಕದಿದ್ದರೆ ಏನು ಮಾಡುವುದು? ? ಸಾಗರವನ್ನು ಯಾವುದಕ್ಕೆ ಹೋಲಿಸಿ ವಿವರಿಸುವುದು ? ಅದು ವಿಶಾಲವಾದ ನೀರು ನಿಂತಿರುವ ದೊಡ್ಡಕೆರೆ ಎನ್ನಲಾದೀತೆ ? ಸಾಗರವನ್ನು ನೋಡದವನಿಗೆ ಅದರ ಆಳ, ವಿಸ್ತಾರ, ಗಾಂಭೀರ್ಯಗಳನ್ನು ಯಾವ ಕೋರಿಕೆಯಿಂದ ಮನದಟ್ಟುಮಾಡುವುದು ? ಇಲ್ಲಿ ಹೋಲಿಸುವ ವಸ್ತುವಿನ ಅಭಾವವಿದೆ. ಅದಕ್ಕೆ ಸಾಗರವು ಸಾಗರದಂತೆ ಇತ್ತು ಎಂದೇ ಹೇಳಬೇಕು. ಆಕಾಶದ ಬಗ್ಗೆ ಕೂಡ ಇದೇ ಮಾತು. ಗಗನಕ್ಕೆ ಗಗನವೇ ಹೋಲಿಕೆ !

ಸಿದ್ಧಗಂಗೆಯ ಪೂಜ್ಯರ ವ್ಯಕ್ತಿತ್ವ ಎಷ್ಟು ಓಜಸ್ವಿಯೂ ತೇಜಸ್ವಿಯೂ ಆಗಿದೆ ಎಂದರೆ ಅದು ಅಮೇಯ, ಉಪಮಾತೀತ, ಅಷ್ಟೇ ಅಲ್ಲ ಅದರ ಬಣ್ಣನೆ ಅನಿರ್ವಚನೀಯ. ಅದರಂತೆ ಕವಲೊಡೆದ ಅವರ ಜನಹಿತ ಸೇವಾಕಾರ್ಯಗಳು.

ಇಷ್ಟಾದರೂ ನಮ್ಮ ಆಧುನಿಕ ಕವಿಗಳು ಪೂಜ್ಯರ ವ್ಯಕ್ತಿತ್ವವನ್ನು, ಅವರ ಸಾಧನೆಗಳನ್ನು ಕುರಿತು ಕಾವ್ಯಕಲೆಯಲ್ಲಿ ಹಿಡಿದಿಡಲು

ನಮ್ರಪ್ರಯತ್ನ ಮಾಡಿದ್ದಾರೆ, ಆ ಮೂಲಕ ತಮ್ಮ ಭಕ್ತಿಭಾವವನ್ನು ಸಮರ್ಪಿಸಿದ್ದಾರೆ. ಅಂಥ ಕೆಲವು ಕವಿವಾಣಿಯನ್ನು ಗಮನಿಸೋಣ.

ಪೂಜ್ಯರ ಲೋಕಕಾರುಣ್ಯವನ್ನು ಕುರಿತು **ಜಿ.ಎಸ್. ಶಿವರುದ್ರಪ್ಪನವರು** ಹೇಳಿರುವ ಮಾತು : ''ಕಾವಿಯುಡುಗೆಯನುಟ್ಟು ನಭವೇ ಕರಣಹಸ್ತವ ಚಾಚಿದೆ. ಎಲ್ಲ ತನ್ನವರೆನ್ನುವ ಭಾವದ ಕರುಣೆಯೇ ಕಣ್ತೆರೆದಿದೆ.''

ಶ್ರೀಗಳವರ ನಿರ್ಮಲ ಮನ ಸುರಗಂಗೆಯಂತೆ, ಅವರ ನುಡಿ ಸುಧೆಯಂತೆ, ಎಂದಿರುವ **ಸಿದ್ಧಯ್ಯ ಪುರಾಣಿಕರ** ಮಾತಿದು : ಸರ್ವಾಂಗ ಲಿಂಗಮಯ, ಮೈನೇತ್ರ ಕರುಣೆದಯ, ಸರ್ವರನು ಪ್ರೀತಿಸುವ ದಿವ್ಯಹೃದಯ, ಶ್ರೀಮಠವು ಎಲ್ಲರಿಗೆ ನಿತ್ಯಾಶ್ರಯ.

ಬೆಟ್ಟಗುಡ್ಡಗಳ ನಡುವೆ ಪುಟಿದ ಗಂಗೆಯು ಸಸ್ಯ ಹಾಗೂ ಜೀವಿಗಳಿಗೆ ಜೀವಕಾರುಣ್ಯವ ತೋರಿದಂತೆ ಸಿದ್ಧಗಂಗೆಯ ಯೋಗಿ ಜಗಜೀವನದ ಕಷ್ಟಕೋಟಲೆಯ ಸ್ತರಕ್ಕಿಳಿದು ತಂಪಿಸಿದ್ದಾರೆ ಎಂದಿದ್ದಾರೆ **ಚನ್ನವೀರ ಕಣವಿ.**

'ಗವಿಯ ಹೊಗದೆ ಬೋಧಿಯನರಸಿ ಮರಗಿಡದ ಬುಡಕ್ಕೆ ಹೋಗದೆ ಜನರ ನಡುವೆಯೇ ಇದ್ದು ಎಲ್ಲರ ಒಳಿತ ಹಾರೈಸುತ್ತಾ ಸಿದ್ಧಗಂಗೆಗೆ ಬೆಳಕ ತಿಲಕವಿಟ್ಟವರು ಅವರೆಂದಿದ್ದಾರೆ ಕವಿ **ಜಿ.ಎಸ್. ಸಿದ್ಧಲಿಂಗಯ್ಯ.**

ಕಾಯಕದ ಶಿಲ್ಪಕ್ಕೆ ಗೋಪುರವ ರೂಪಿಸುತ ವಾಸ್ತವವ ಕ್ಷಿತಿಜದಾ ಪಥಿಕ, ರೂವಾರಿ, ನಿನಗೆ ಬಾಗಿದೆ ಮುಗಿಲು ಧನ್ಯತೆಯ ಸೂಸುತ್ತ, ಬೆಳಕ ಬಾಗಿಲ ತೆರೆದು ಹರಸುತಿದೆ ಹತ್ತುದಿಶೆ' ಎಂದಿದ್ದಾರೆ **ದೇವೇಂದ್ರ ಕುಮಾರ ಹಕಾರಿ.**

ಇದು **ಎಂ.ವಿ. ಸೀತಾರಾಮಯ್ಯನವರ** ನುಡಿ; 'ಧರ್ಮಸಾಧನೆಗೆ ಮಾನವನೊಡಲು ಮೊದಲೆಂಬ ವಾಸ್ತವವ ಮನಗಂಡ ಧರ್ಮವಿದರು, ಒಮ್ಮನದಿ ಸಾಹಸ್ರ ಸಂಖ್ಯಾತ ಛಾತ್ರರಿಗೆ ಉಣಲಿರಲು ಎಡೆಕಲ್ಪಿಸಿದ ಸದ್ಗುರು... ಕೈವಲ್ಯಪಯಣಕ್ಕೆ ಬುತ್ತಿಯನು ಕಟ್ಟಿಕೊಟ್ಟೆಸಗಿಹಿರಿ ಇಹಪರದ ಜೋಡ'

**ಜೋಳದರಾಶಿ ದೊಡ್ಡನಗೌಡರ** ನುಡಿ ನೈವೇದ್ಯವಿದು: ಸುಮನಸರು ಸುಜ್ಞಾನ ಪಂಡಿತರು, ಸುಮತಿಗಳು, ಸುವಿಚಾರಶೀಲರು, ಸಮತೆಯಿಂ ಜೀವಾತ್ಮರೆಲ್ಲರ ನೋವ ನೆನೆವವರು.

ಶ್ರೀ ಶಿವಕುಮಾರಸ್ವಾಮಿಗಳು ಸಂನ್ಯಾಸಿಯಾದರೂ ವಿಶ್ವಕುಟುಂಬ ಎಂದು ಕಂಡಿರುವ ಸಿಂಪಿಲಿಂಗಣ್ಣನವರ ನುಡಿಯಿದು: 'ಸಿದ್ಧಗಂಗೆಯ ದೀಪ ಶಿವಕುಮಾರಸ್ವಾಮಿ ಸಂನ್ಯಾಸಿ ಹೊತ್ತಿಹನು ಈ ದೇಶ ಸಂಸಾರ'.

ಶ್ರೀ ಸಿದ್ಧಗಂಗಾ ಕ್ಷೇತ್ರವಿದು ಮುಕ್ತಿಯ ಮಂಗಳ ಮನೆಯಾಗಿಹುದು ಎಂದಿರುವ **ಮೋಟಗಿ ಮಲ್ಲಿಕಾರ್ಜುನರು** 'ಕಂತುಹರರೂಪಿ ಶಿವಕುಮಾರ ಸ್ವಾಮೀಜಿ ಮಾತೃಪ್ರೇಮದಿಂದಿಂತು ಸಕಲ ಧರ್ಮದ ವಿದ್ಯಾರ್ಥಿಗಳೆಲ್ಲರು ರಕ್ಷಿಸುತ್ತಿರ್ಪರು ನೋಡಾ' ಎಂದು ಉದ್ಗಾರ ತೆಗೆದಿದ್ದಾರೆ. ಹಡವನಹಳ್ಳಿ ಚಿಕ್ಕಬಸವಯ್ಯ ತಮ್ಮ ಅನಿಸಿಕೆಗಳನ್ನು ವ್ಯಕ್ತಗೊಳಿಸಿರುವುದು ಹೀಗೆ :

'ಶ್ರೀ ಸಿದ್ಧಲಿಂಗೇಶನಡಿಯಲ್ಲಿ ಕಂಡೆ ಕರ್ತಾರನ ಕಮ್ಮಟವ, ದಿವ್ಯದರ್ಶನವ ಈ ಧರ್ಮಕಮ್ಮಟದಿ ಉಪದೇಶಕೆಡೆಯಿಲ್ಲ, ಯಜ್ಞಯಾಗಾದಿಗಳಿಲ್ಲ ಮಡಿ ಮೈಲಿಗೆಗಳ ಸೋಂಕಿಲ್ಲ, ಈ ಕರ್ಮಶಾಲೆಯಲ್ಲಿ ದೇಹವೇಅಡಿಗಲ್ಲುತನುಮನವು ದುಡಿಯುತಿರೆ ಕಾಯಕವೆ ಕೈಂಕರ್ಯ, ಸಕಲಸಂಪದನು ಈ ಧರ್ಮಕಮ್ಮಟದಿ ದಾಸೋಹವೆ ದಿವ್ಯಮಂತ್ರ ಗುರುವರನ ಕೈಗುಣವು ಹೇಳಲಸದಳವು'

ಶ್ರೀಗಳನ್ನೇ ಸಂಬೋಧಿಸಿ ಕವನಿಸಿರುವ **ಗೊ.ರು.ಚ.** ಅವರು ಹೇಳಿರುವುದು ಹೀಗೆ :

'ಕಾಯಕವೆ ಕೈಲಾಸ ಶ್ರುತಿಯು ಕೃತಿಗೈತಂದ ಕರ್ಮಯೋಗದ ತತ್ವಶೀಲರು ನೀವು ಮೇಲು ಕೀಳುಗಳೆಂಬ ಮಾಲಿನ್ಯವನೆ ಕಳೆದ ಮಾನವೀಯತೆಯ ಘನಮೌಲ್ಯ ನೀವು.

**ಕೊಳ್ಳೇಗಾಲದ ಪಿ. ಬಸವಣ್ಣನವರು** ನೀಡಿರುವ ಶಬ್ದ ಚಿತ್ರ ನೋಡಿ :

*ಮಿಸುನಿವಣ್ಣದ ಮೈಗೆ ಹಸನ ಕಾವಿಯ ಧರಿಸಿ*
*ಲಸಿತ ಭಸಿತವ ಪೂಸಿ ನೊಸಲಮಿಗೆ ಸಿಂಗರಿಸಿ*
*ಎಸೆವ ರುದ್ರಾಕ್ಷಿಯಿಂ ಕೊರಳನ್ನಲಂಕರಿಸಿ ವಿನಯದಿಂದ ನವರತವು!*
*ತುಸು ಬಾಗಿ ಶೋಭಿಸುವ ತಲೆಗೆ ಮುಂಡಾಸಿರಿಸಿ*
*ಮಸುಳಿಸದ ಸೂರ್ಯಸಮ ತೇಜದಿಂ ಕಂಗೊಳಿಪ*
*ಅಸಮಾಕ್ಷ ಸಮರೂಪ ಶಿವಕುಮಾರೇಶ ವಿಭು!*

**ಶಾರದಾ ರಾಜಶೇಖರರು** ಪೂಜ್ಯರಲ್ಲಿ ಮಾನನ ಮನವ ತಿದ್ದಿತೀಡಿ ರೂಪಿಸುವ ಮಹಾಶಿಲ್ಪಿಯನ್ನು ಕಂಡಿರುವುದು ಹೀಗೆ : ''ಲೋಕಜನಮನವೆಂಬ ಗಡುಸುಶಿಲೆಯನ್ನು ಕಡೆಯುವಿರಿ ದಿವ್ಯದಾದರ್ಶ ದುಳಿಯಿಂದೆ ಕಡೆದು ಮೂರ್ತಿಗೊಳಿಸುತಾದಿರಿ ಆದರ್ಶ ಶಿಲ್ಪಿ''.

ಹೀಗೆ ನೂರಾರು ಕವಿಗಳು ಬಣ್ಣಿಸಿದರೂ ಪೂರ್ಣವಾಗಿ ಕಟೆದು ನಿಲ್ಲಿಸಲಾಗದ ಮಹಾವಿಭೂತಿ ವ್ಯಕ್ತಿತ್ವ ಸಿದ್ಧಗಂಗೆಯ ಸಿದ್ಧಪುರುಷರದು. ಆ ಮಹಾತಪಸ್ಸಿಗೆ ಕಾಯಕಯೋಗಿಗೆ, ಪುಣ್ಯಜ್ಯೋತಿಗೀಗಾ ೯೫ ವರ್ಷ ! ಜನಮದಂಗಳದ ಮಂಗಳ ಮೂರ್ತಿಯು ಇನ್ನೂ ನೂರ್ಕಾಲ ನಮ್ಮೊಡನಿದ್ದು ನಮ್ಮನ್ನು ಹರಸುತ್ತಿರಲಿ ಎಂದು ಲಕ್ಷ ಲಕ್ಷ ಕೊರಳುಗಳು ದನಿಯಾಗಿ ಪ್ರಾರ್ಥಿಸೋಣ.







# ನಾನು ಕಂಡ ಪೂಜ್ಯ ಶ್ರೀಗಳು

ಎಲ್. ರೇವಣ್ಣಸಿದ್ಧಯ್ಯ
ನಿವೃತ್ತ ಪೋಲೀಸ್ ಮಹಾನಿರ್ದೇಶಕರು
೭೭೭/ಡಿ, ನೂರು ಅಡಿ ರಸ್ತೆ,
ಎಚ್.ಎ.ಎಲ್. ಎರಡನೇ ಹಂತ,
ಇಂದಿರಾನಗರ, ಬೆಂಗಳೂರು-೫೬೦ ೦೩೮



**ನಾ**ನು ೪-೫ ವರ್ಷಗಳ ಬಾಲಕನಾಗಿದ್ದ ದಿನಗಳ ನೆನಪು ಇದು. ಶ್ರೀ ಶ್ರೀಗಳವರ ಕಾರು ನಮ್ಮೂರ (ನಂದೀಹಳ್ಳಿ) ಮುಂದೆ ಹಲವು ದಿನಗಳಿಗೊಮ್ಮೆ ಹಾಯ್ದು ಹೋಗುತ್ತಿತ್ತು. ಅತಿ ನಿಧಾನ ಮತ್ತು ಗಂಭೀರವಾಗಿ ಚಲಿಸುತ್ತಿದ್ದ ಕಾರನ್ನು ದೂರದಿಂದಲೇ ನಮ್ಮೂರ ಜನ ಗುರುತಿಸುತ್ತಿದ್ದರು. ರಸ್ತೆಯ ಬದಿಯ ಶಾಲೆಯ ಹೊರಾಂಗಣದಲ್ಲಿರಲಿ ಅಥವಾ ತೋಟದಲ್ಲಿರಲಿ, ನಾವು ರಸ್ತೆಯ ಕಡೆಗೆ ಹೋಗಿ ದೇವರ ಉತ್ಸವವನ್ನು ನೋಡುವ ಭಕ್ತಿ, ಕುತೂಹಲ ಆಸಕ್ತಿಯಿಂದ ತುಂಬಿದ ಭಾವನೆಯಿಂದ ಶ್ರೀಗಳ ದರ್ಶನವನ್ನು ಮಾಡುತ್ತಿದ್ದೆವು. ನಮ್ಮೂರಿನ ೪-೬ ವಿದ್ಯಾರ್ಥಿಗಳು ಶ್ರೀಕ್ಷೇತ್ರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಅವರೆಲ್ಲ ನುಣ್ಣಗೆ ತಲೆ ಬೋಳಿಸಿಕೊಂಡು ಹಣೆಗೆ ವಿಭೂತಿ ಧರಿಸುವ ಅವರು, ಸಂಸ್ಕೃತದ ಹಲವು ಶ್ಲೋಕಗಳನ್ನು, ಅಮರಕೋಶಧಿಂದ ಆಯ್ದ ಕೆಲವು ಭಾಗಗಳನ್ನು ಊರಿನ ಕಲಿತ ಹಿರಿಯರ ಮುಂದೆ ನಿರರ್ಗಳವಾಗಿ ಹೇಳುತ್ತಿದ್ದರು. ಈ ಸನ್ನಿವೇಶವನ್ನು ನೋಡಿದಾಗಲೆಲ್ಲ ಅವರೇ ಹೆಚ್ಚು ಅದೃಷ್ಟಶಾಲಿಗಳು, ಎಂಬ ಭಾವನೆ ಮೂಡಿ, ನಾನೂ ಒಂದು ದಿನ ಆ ರೀತಿ ಶ್ರೀಕ್ಷೇತ್ರದಲ್ಲಿ ವಿದ್ಯಾಭ್ಯಾಸ ಮಾಡಬೇಕೆಂಬ ಆಸೆ ನನ್ನ ಮನಸ್ಸಿನಲ್ಲಿ ಮೂಡುತ್ತಿತ್ತು.

ನಮ್ಮೂರ ಹವ್ಯಾಸಿ ಕಲಾವಿದರು ಪ್ರದರ್ಶಿಸ ಬೇಕಾಗಿದ್ದ ಶನಿಮಹಾತ್ಮೆ ನಾಟಕದ ಸಮಾರಂಭಕ್ಕೆ ಶ್ರೀ ಶ್ರೀಗಳವರನ್ನು ಆಹ್ವಾನಿಸಿದ್ದುದು ನಮ್ಮೂರ ಜನರಿಗೇ ಅಲ್ಲ, ಆಸುಪಾಸಿನ ಹಳ್ಳಿಯ ಜನರಿಗೂ ಸಹ ಒಂದು ಸಡಗರದ ಸಮಾರಂಭವೇ ಆಗಿತ್ತು. ನಮ್ಮ ತಂದೆಯವರು (ಲೇ|| ಎಸ್.ಎಸ್. ಲಿಂಗಪ್ಪನವರು) ಅಂದಿಗೆ ಊರಿನ ಕಾರುಬಾರಿನಲ್ಲಿ ಚಟುವಟಿಕೆಯಿಂದ ಓಡಾಡುವ ವ್ಯಕ್ತಿಯೇ. ಅಲ್ಲದೇ ಓದು-ಬರಹ ಬಲ್ಲ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದರು. ಅವರ ಮಗ (ನಾನು) ಐದು ವರ್ಷ ತುಂಬಿಲ್ಲದಿದ್ದರೂ ಓದುವುದರಲ್ಲಿ



ಕಾಯಕದ ತರಬೇತಿ

ತುಂಬಾ ಚೂಟಿ ಎಂಬುದು ಅವರಿಗೆ ಬಹಳ ಹೆಮ್ಮೆ. ಶ್ರೀ ಶ್ರೀಗಳವರ ಬಗ್ಗೆ ಒಂದು ಪುಟ್ಟ ಭಾಷಣವನ್ನು ಬರೆಯುವಂತೆ ಪ್ರೇರೇಪಿಸಿ ತಿದ್ದಿ ಕಂಠಪಾಠ ಮಾಡಿಸಿ, ಶ್ರೀ ಶ್ರೀಗಳು ನಾಟಕದ ಸಮಾರಂಭಕ್ಕೆ ಆಗಮಿಸುವ ದಿನವನ್ನು ಎದುರು ನೋಡುತ್ತಿದ್ದರು. ನಾಟಕದ ಸಂಭ್ರಮದ ಸಂಜೆ ಬಂತು. ರಾತ್ರಿ ತಡವಾಗಿ ನಾಟಕ ಪ್ರಾರಂಭವಾದ್ದರಿಂದ ನಾನು ಮಲಗಿಬಿಟ್ಟಿದ್ದೆನಂತೆ. ಪ್ರಾಯಶಃ ನನ್ನ ತಂದೆಯವರ ಪಾಲಿಗೆ ಅಂದಿನ ಸಮಾರಂಭದ ಬಹುಮುಖ್ಯ ಪಾತ್ರಧಾರಿ ನಾನೇ ಆಗಿರಬೇಕು. ನನ್ನನ್ನು ನಿದ್ದೆಯಿಂದ ಎಚ್ಚರಗೊಳಿಸಿ ಮುಖ ತೊಳೆಸಿ, ನಿಲ್ಲಿಸಿ ಭಾಷಣದ ತುಣುಕನ್ನು ಶ್ರೀ ಶ್ರೀಗಳವರ ದಿವ್ಯಸನ್ನಿಧಿಯಲ್ಲಿ ಓದಿಸಿದರು. ನಿದ್ರೆ ಕಣ್ಣಿನಲ್ಲಿ ಅದೇನು ಓದಿದೆನೋ ಗೊತ್ತಿಲ್ಲ. ನಾಳೆಯ ದಿನ ನಮ್ಮೂರ ಹಲವರು 'ನೀನು ಸ್ವಾಮಿಗಳ ಮುಂದೆ ಚೆನ್ನಾಗಿ ಓದಿದೆ' ಎಂದು ಹೇಳಿದ್ದು ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದ ನೆನಪು ನನ್ನ ಮನಸ್ಸಿನಲ್ಲಿ ಸದಾ ಹಚ್ಚ ಹಸಿರಾಗಿದೆ.

ನಾಟಕದ ನಂತರ ೫-೬ ವರ್ಷಗಳಲ್ಲಿ ನಮ್ಮ ಕುಟುಂಬದ ಪರಿಸ್ಥಿತಿ ನಾಟಕೀಯ ಬದಲಾವಣೆಗಳನ್ನು ಕಂಡಿತ್ತು. ತಂದೆಯವರ ದೀರ್ಘಾವಧಿ ಕಾಯಿಲೆ, ಒಬ್ಬ ಅಕ್ಕನ ಸಾವು, ನಾಲ್ಕಾರು ಜಾನುವಾರುಗಳು ಹುಲಿ ಮತ್ತು ರೈಲಿನ ಪಾಲಾದದ್ದು, ನಮ್ಮ ಕುಟುಂಬದ ಆರ್ಥಿಕ ಸ್ಥಿತಿಯನ್ನು ಬಹುಕ್ಷೀಣದೆಸೆಗೆ ಎಳೆದಿದ್ದವು. ಒಬ್ಬನೇ ಗಂಡು ಮಗನಾದ ನನಗೆ ಉತ್ತಮ ವಿದ್ಯಾಭ್ಯಾಸಕ್ಕೆ ಅವಕಾಶ ಕಲ್ಪಿಸಿಕೊಡ ಬೇಕೆಂಬ ಮಹಾದಾಕಾಂಕ್ಷೆ ಇದ್ದ ನಮ್ಮ ತಂದೆಯವರು ನನ್ನನ್ನು ಶ್ರೀಕ್ಷೇತ್ರಕ್ಕೆ ಕರೆತಂದರು. ನಮ್ಮ ತಾಯಿಯವರು ಅವರ ತವರೂರಿನಿಂದ ತಂದಿದ್ದ ಕಬ್ಬಿಣದ ಟ್ರಂಕ್ ಒಂದರಲ್ಲಿ ನನ್ನ ಬಟ್ಟೆ, ಬರೆ, ಪುಸ್ತಕಗಳನ್ನು ತುಂಬಿದರು. ಅದನ್ನು ನನ್ನ ತಂದೆಯವರೇ ಹೊತ್ತುಕೊಂಡು ಹಿರೇಹಳ್ಳಿಯವರೆಗೆ ನಡೆದು ನಂತರ ರೈಲಿನಲ್ಲಿ ಕ್ಯಾತ್ಸಂದ್ರಕ್ಕೆ ನನ್ನೊಡನೆ ಪ್ರಯಾಣ ಮಾಡಿ, ಶ್ರೀ ಕ್ಷೇತ್ರದಲ್ಲಿ ನನ್ನನ್ನು ಶ್ರೀಗಳ ಪಾದಕ್ಕೆ ಒಪ್ಪಿಸಿದರು. ಹೈಸ್ಕೂಲು ಮೊದಲನೇ ತರಗತಿಗೆ ತುಮಕೂರಿನ ಹೊರ ಭಾಗದಲ್ಲಿದ್ದ ಶ್ರೀ ಸಿದ್ಧಗಂಗಾ ಹೈಸ್ಕೂಲಿಗೆ ಸೇರಿದೆ. ಅಂದಿನ ದಿನಗಳಲ್ಲಿ ಸಿದ್ಧಗಂಗಾ ಹೈಸ್ಕೂಲು ಬಹಳ ಹೆಮ್ಮೆಯ ಸಂಸ್ಥೆಯಾಗಿತ್ತು. ಸುಂದರ ಕಟ್ಟಡ, ಸ್ವಚ್ಛ ನೈಸರ್ಗಿಕ ಪರಿಸರ, ಅತ್ಯುತ್ತಮ ಶಿಕ್ಷಕ ವರ್ಗದಿಂದ ಕೂಡಿದ್ದ ಆ ನಮ್ಮ ಶಾಲೆಗಿಂತ ಚೆನ್ನಾಗಿ ಯಾವ ಶಾಲೆಯೂ ಇಲ್ಲ ಎಂಬ ಭಾವನೆ ನನ್ನಲ್ಲಿತ್ತು. ತುಮಕೂರು ಸರ್ಕಾರಿ ಶಾಲೆಯನ್ನು ಹೊರಗಿನಿಂದ







ಶ್ರೀಮಠದಲ್ಲಿ ಪ್ರತಿನಿತಿಯ ನಡೆಯುವ ಸಾಮೂಹಿಕ ಪ್ರಾರ್ಥನೆ

ಮಾತ್ರ ನೋಡಿ ನಾನು ಈ ಭಾವನೆಯಿಂದ ತುಂಬಿ ತುಳುಕಿದವನಾಗಿದ್ದರೂ ಸಹ ಅಂದಿನ ದಿನಗಳಲ್ಲಿ ಶ್ರೀ ಸಿದ್ಧಗಂಗಾ ಪ್ರೌಢಶಾಲೆ ನಿಜಕ್ಕೂ ಅಂತಹ ಖ್ಯಾತಿಯನ್ನು ಗಳಿಸಿತ್ತು.

ಮೊದಲಿನ ವರ್ಷ ಹೊಸ ಪಾಠಶಾಲೆಯಲ್ಲಿ ನನಗೆ ವಸತಿ ಸೌಲಭ್ಯ ದೊರಕಿತ್ತು. ಶ್ರೀಯುತ ಬಿ.ಕೆ. ಲಿಂಗಯ್ಯನವರು ಮತ್ತು ಮಲ್ಲವೀರಯ್ಯನವರು ನಮ್ಮ ನಿರ್ವಾಹಕರಾಗಿದ್ದರು. ರಾತ್ರಿ ಪೂಜೆ ಮತ್ತು ಪ್ರಸಾದದ ನಂತರ ಶ್ರೀಗಳವರು ಹಳೆಮಠದಿಂದ ಹೊರಟು ಮಾರ್ಕಾಂಡೇಯ ನಿಲಯದ ಮಹಡಿಯ ಮೇಲೆ ಇದ್ದ ಕೊಠಡಿಯಲ್ಲಿ ಮಲಗುತ್ತಿದ್ದರು. ಪ್ರಶಾಂತ ರಾತ್ರಿಯಲ್ಲಿ ಅವರು ಹಳೇ ಮಠದಿಂದ ಹೊರಟು ರಥಬೀದಿಯ ಮುಖಾಂತರ ಹಾದು ಹೋಗುವಾಗ ಅವರ ಪಾದರಕ್ಷೆಗಳ ಶಬ್ದ ಲಟಲಟನೆ ಕೇಳಿಸುತ್ತಿತ್ತು.

### ಶ್ರೀ ಗುರು ಕಾರುಣ್ಯ

ಚಿಕ್ಕವಯಸ್ಸಿನ (ಹನ್ನೊಂದು ವರ್ಷ) ನಮ್ಮೆಲ್ಲರ ಹೃನ್ಮನಗಳಲ್ಲಿ ಆ ಶಬ್ದ ವಿಶೇಷ ಜಾಗೃತಿಯನ್ನು ಬಡಿದೇಳಿಸುತ್ತಿತ್ತು. ಎಷ್ಟೇ ತಡವಾಗಿದ್ದರೂ ಶ್ರೀ ಶ್ರೀಗಳು ಮಾರ್ಕಂಡೇಯ ನಿಲಯದ ಕೊಠಡಿಗೆ ತಲುಪಿ ಹಾವಿಗೆಯ ಶಬ್ದ ನಿಲ್ಲುವವರೆಗೂ ಎಲ್ಲರೂ ತಮ್ಮ ತಮ್ಮ ಭಾಗಗಳಲ್ಲಿ ಅಧ್ಯಯನದಲ್ಲಿ ನಿರತರಾಗಿರಬೇಕೆಂಬುದು ಅಲಿಖಿತ ಮತ್ತು ಅಘೋಷಿತ ನಿಯಮವಾಗಿತ್ತು. ನಮ್ಮ ಟ್ರಂಕ್‌ಗಳೇ ಪುಸ್ತಕವನ್ನು ಇಡುವ ಪೀಠಗಳು. ಟ್ರಂಕ್ /ಪೆಟ್ಟಿಗೆಯ ಅಗಲಕ್ಕೇ ಸೀಮಿತವಾಗಿರುತ್ತಿದ್ದ ನಮ್ಮ ನಮ್ಮ ಚಾಪಗಳೇ ನಾವು ಅಧ್ಯಯನಕ್ಕೆ ಕೂಡುತ್ತಿದ್ದ ಆಸನವೂ ಆಗಿರುತ್ತಿದ್ದವು. ಅಪ್ಪಿ-ತಪ್ಪಿ ನಮ್ಮಲ್ಲಿ ಹಲವರು ಏನು, ಬಹುತೇಕ ವೇಳೆ, ನಮ್ಮಲ್ಲಿ ಹಲವರು ಮಾರ್ಕಂಡೇಯ ನಿಲಯದಿಂದ ಹಾವಿಗೆಯ ನಿಶ್ಯಬ್ಧತೆಯಿಂದ ಬರಬೇಕಾಗಿದ್ದ ಸಂದೇಶಕ್ಕೆ ಮೊದಲೇ ಟ್ರಂಕಿನ ಮೇಲಿನ ಪುಸ್ತಕವೇ ದಿಂಬಾಗಿ ನಿದ್ರಾದೇವಿಯ ಪರವಶರಾಗುತ್ತಿದ್ದೆವು. ಅಂತಹವರನ್ನು ಬಡಿದೆಬ್ಬಿಸುವ ಕಾಯಕವನ್ನು ನಮ್ಮ ಕೊಠಡಿಯ ನಿರ್ವಾಹಕರು ಮಾಡುತ್ತಿದ್ದರು. ಮುಂದಿನ ವರ್ಷ ಹೈಸ್ಕೂಲು ಎರಡನೇ ತರಗತಿಗೆ ಉತ್ತೀರ್ಣನಾದಾಗ ನನಗೆ ಮಾರ್ಕಾಂಡೆಯ ನಿಲಯದ ಮಹಾದ್ವಾರದ ಎಡಭಾಗದ ಕೊಠಡಿಯಲ್ಲಿ ವಸತಿ ದೊರಕಿತ್ತು. ಶ್ರೀಗಳವರ ಹಾವಿಗೆಯ ನಿನಾದ ಇನ್ನೂ ಹೆಚ್ಚು ಚೆನ್ನಾಗಿ ಕೇಳಿಸುವುದರ ಜೊತೆಗೆ ಬಹುತೇಕ ವೇಳೆ ಶ್ರೀಗಳು ನಮ್ಮ ಕೊಠಡಿಗೆ ಭೇಟಿ ಕೊಟ್ಟು ಯಾರು ಏನು ಓದುತ್ತಾರೆ ಎಂಬುದನ್ನು ಸಹ ಪರಿಶೀಲಿಸುತ್ತಿದ್ದರು. ನಿದ್ರಾವಸ್ಥೆಯಲ್ಲಿದ್ದ ನಮ್ಮ ಸಹ ಪಾಠಿಗಳು ಹಲವು ವೇಳೆ ಹಾವಿಗೆಯ ಶಬ್ಧಕ್ಕೆ ಬೆಚ್ಚಿ ಬಿದ್ದು ಎದ್ದು ಏಕಾಗ್ರತೆಯಿಂದ ಅಧ್ಯಯನ ಮಾಡುತ್ತಿದ್ದರೋ ಏನೋ ಎಂಬಂತೆ ತೆರೆದ ಪುಸ್ತಕ ಹಿಡಿದು ಕೂರುತ್ತಿದ್ದರು. ಅಂತಹವರನ್ನು ಹೇಗೆ ಶ್ರೀಗಳು ಗುರುತಿಸುತ್ತಿದ್ದರೋ ನಮಗಂತೂ ಗೊತ್ತಾಗುತ್ತಿರಲಿಲ್ಲ. ಅವರ ಕಿವಿಯನ್ನು ಲಘುವಾಗಿ ಹಿಡಿದು ಒತ್ತಿ ಏನು ಓದುತ್ತಿದ್ದೆ ಎಂದು ಕೇಳುತ್ತಿದ್ದರು. ಪುಸ್ತಕವನ್ನು ತಲೆಕೆಳಗಾಗಿ ಹಿಡಿದೋ, ಹಿಡಿದ ಪುಸ್ತಕ ತೆರೆದ ಹಾಳೆಯಲ್ಲಿರುವ ವಿಷಯವೇ ಒಂದಾಗಿದ್ದು ಅವರು ಹೇಳಿದ್ದೇ ಒಂದಾಗಿರುವುದರಿಂದಲೋ ಬಹಳ ಸುಲಭವಾಗಿ ಸುಳ್ಳು ಹೇಳಿದವರು ಸಿಕ್ಕಿಹಾಕಿಕೊಳ್ಳುತ್ತಿದ್ದರು. ಹಿಡಿದಿದ್ದ ಕಿವಿಯನ್ನು ಬಿಟ್ಟು ಸೂಕ್ಷ್ಮವಾಗಿ ಕಪಾಳ ಸ್ಪರ್ಶ ಮಾಡಿ "ಸುಳ್ಳು ಹೇಳ್ತಿಯಾ" ಎಂದು ಹೇಳಿ ಮುಂದು ವರೆಯುತ್ತಿದ್ದರು ಶ್ರೀಗಳು.

ಈ ರೀತಿ ತಮ್ಮ ಹಾವಿಗೆಯ ನಡೆಯಲ್ಲಿ ವಾತ್ಸಲ್ಯದ ನುಡಿಯಿಂದ 'ಸದಾ ಜಾಗೃತರಾಗಿರಿ; ಸುಳ್ಳು ಹೇಳಬೇಡಿ ಎಂಬ ಸಂದೇಶವನ್ನು ನಮ್ಮೆಲ್ಲರ ಮನದಲ್ಲೂ ಶ್ರೀಗಳು ಮುದ್ರಿಸಿದರು ಎಂದರೆ ಅತಿಶಕೋಕ್ತಿಯಲ್ಲ.

ಬೋಧಕರಾಗಿ

ಸರ್ವೇಸಾಮಾನ್ಯವಾಗಿ ಬೆಳಿಗ್ಗೆ ನಮಗೆ ಶ್ರೀಗಳವರ ದರ್ಶನ ನಡೆಯುತ್ತಿದ್ದುದು ೭ ರಿಂದ ೮.೩೦ ರವರೆಗೆ ನಡೆಯುತ್ತಿದ್ದ ಸಂಸ್ಕೃತ ಅಧ್ಯಯನದಲ್ಲಿ. ನಮ್ಮ ತರಗತಿಗೆ ಸಂಬಂಧಿಸಿದಂತೆ ಶ್ರೀ ಶ್ರೀಗಳು 'ರಘುವಂಶ', 'ಕುಮಾರ ಸಂಭವ'ವನ್ನು ಬೋಧಿಸುತ್ತಿದ್ದರು. ಹಲವು ವೇಳೆ ಎಸ್.ಎಸ್.ಎಲ್.ಸಿ. ಮತ್ತು ಇತರ ವಿದ್ಯಾರ್ಥಿಗಳಿಗೆ ಆಂಗ್ಲಭಾಷೆಯ ಪಠ್ಯಪುಸ್ತಕದಲ್ಲಿನ ಆಯ್ದ ಪಾಠಗಳನ್ನು ಸಹ ಬೋಧಿಸುತ್ತಿದ್ದರು. ಶ್ರೀಗಳವರ ಈಗಿನ ಆಫೀಸಿನ ಮುಂಭಾಗದ ಮೊಗಸಾಲೆಯಲ್ಲಿ ಎರಡು ಸಾಲಿನಲ್ಲಿ ನಾವೆಲ್ಲಾ ಕುಳಿತುಕೊಳ್ಳುತ್ತಿದ್ದೆವು. ಆಫೀಸಿನ ಬಾಗಿಲಿನ ಪಕ್ಕದಲ್ಲಿರುವ ವಿಶಾಲವಾದ ಆಸನದ ಮೇಲೆ ಶ್ರೀಗಳು ಕುಳಿತುಕೊಳ್ಳುತ್ತಿದ್ದರು. ವಿಷಯ ಬೋಧನೆಯನ್ನು ಬಹುತೇಕ ಮೊಗಶಾಲೆಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ಓಡಾಡುತ್ತಲೇ ಬೋಧಿಸುತ್ತಿದ್ದರು. ಅತ್ಯಂತ ಸ್ಪಷ್ಟವಾಗಿ ಸಂಸ್ಕೃತ ಶಬ್ದಗಳನ್ನು ಬೋಧಿಸುತ್ತಿದ್ದರು. ಅತ್ಯಂತ ಸ್ಪಷ್ಟವಾಗಿ ಸಂಸ್ಕೃತ ಶಬ್ದಗಳನ್ನು ಉಚ್ಚರಿಸುತ್ತಿದ್ದರು. ಸುಲಲಿತವಾಗಿ ಶ್ಲೋಕಗಳನ್ನು ಹೇಳುತ್ತಿದ್ದರು. ಮನಮುಟ್ಟುವಂತೆ ವಿಷಯವನ್ನು ಬಿಡಿಸಿ ಬೋಧಿಸುತ್ತಿದ್ದರು. ನಿರರ್ಗಳವಾದ ಮಾತು. ಅಶರೀರವಾಣಿಯಂತೆ ಮೊಗಸಾಲೆಯ ಎಲ್ಲೆಡೆ ತುಂಬುತ್ತಿತ್ತು. ಶ್ರೀಮಠದ ವಠಾರದಲ್ಲಿ ನಿಶ್ಯಬ್ಧತೆ ಆವರಿಸುತ್ತಿತ್ತು.

ಬೆಳಗಿನ ಪ್ರಸಾದದ ನಂತರ ತುಮಕೂರಿನ ಶಾಲೆಗೆ ಹೋಗಿ ಸಂಜೆ ಹಿಂದಿರುಗುವಾಗ ಶ್ರಮದಾನದಲ್ಲಿ ಪಾಲ್ಗೊಳ್ಳುತ್ತಿದ್ದೆವು. ಅಷ್ಟು ದೂರ ನಡೆದು ಹೋಗಿ ಬಂದ ಮೇಲೆ ಎಂತಹ ಶ್ರಮದಾನ ಎಂದು ಬೆರಗಾಗಬಹುದು ಹಲವರು. ಅದು ಶ್ರಮವೂ ಅಲ್ಲ, ದಾನವೂ ಅಲ್ಲ ಬೇರೆ ಏನೋ ಆಗಿತ್ತು ಎಂದು ನನ್ನ ಭಾವನೆಯನ್ನು ಹಂಚಿಕೊಳ್ಳಲಿಚ್ಛಿಸುತ್ತೇನೆ.

ಕಾಯಕತತ್ವದ ಅನುಷ್ಠಾನ

ವಿದ್ವಾನ್ ರುದ್ರಾರಾಧ್ಯ ಶರ್ಮಾರವರು ಶ್ರಮದಾನದ ನಿರ್ವಹಣೆಯನ್ನು ಕಟ್ಟುನಿಟ್ಟಾಗಿ ನೋಡಿಕೊಳ್ಳುತ್ತಿದ್ದರು. ಶ್ರೀ ಬಿ.ಕೆ. ಲಿಂಗಯ್ಯನವರು ಅವರ ಬಲಗೈ ಬಂಟರಾಗಿದ್ದರು. ನಾನು ಶ್ರಮದಾನಕ್ಕೆ ಒಂದು ದಿನವೂ ತಪ್ಪಿಸಿಕೊಂಡವನಲ್ಲ. ಏನೆಲ್ಲಾ ನೆಪಹೇಳಿ ಹಲವರು 'ಚಕ್ಕರ್' ಹಾಕುತ್ತಿದ್ದರು. ನಾನು 'ಚಿಕ್ಕಹುಡುಗರ ಶ್ರೇಣಿ'ಗೆ ಸೇರಿದವನಾಗಿದ್ದೆ. ಅಂದಿನ ದಿನಗಳಲ್ಲಿ ಬಹುತೇಕ ಕಲ್ಲು ಸಾಗಿಸುವುದು ಶ್ರಮದಾನದ ಪ್ರಮುಖ ಕಾರ್ಯಕ್ರಮ ವಾಗಿತ್ತು. ಈಗ ಬೆಟ್ಟಕ್ಕೆ ವಾಹನದಲ್ಲಿ ಹೋಗಲು ಮಾಡಿರುವ ರಸ್ತೆಯ ಮಾರ್ಗ ಪ್ರಾರಂಭವಾಗುವ ಪ್ರದೇಶದಲ್ಲಿ ಬೆಟ್ಟದ ಅರ್ಧಕ್ಕಿಂತಲೂ ಮೇಲ್ಭಾಗದಲ್ಲಿ ಕಾರ್ಮಿಕರು ಕಲ್ಲನ್ನು ಸಂಗ್ರಹಿಸಿಡುತ್ತಿದ್ದರು. ಬೆಟ್ಟದ ಮೇಲ್ಭಾಗದಿಂದ ಕಲ್ಲನ್ನು ಎತ್ತಿ ಎಸೆದು ಉರುಳಿಸುವುದರ ಮೂಲಕ ಕಲ್ಲುಗಳು ಬೆಟ್ಟದ ಬುಡ ತಲುಪುತ್ತಿದ್ದವು. ಆ ಕೆಲಸವನ್ನು ''ದೊಡ್ಡ ಹುಡುಗರು'' ಅಂದರೆ ಮೇಲಿನ ತರಗತಿಯಲ್ಲಿ ಅಧ್ಯಯನ ಮಾಡುತ್ತಿದ್ದವರು ನಿರ್ವಹಿಸುತ್ತಿದ್ದರು. ಆ ದೊಡ್ಡ ಹುಡುಗರ ನೇತಾರ ಯಾರು ಗೊತ್ತೆ ? ಅತಿ ದೊಡ್ಡ ಹುಡುಗ ಶ್ರೀ ಶ್ರೀಗಳವರೇ ! ನಲವತ್ತರ ಹರೆಯದಲ್ಲಿದ್ದ ಶ್ರೀ ಶ್ರೀಗಳು ಕಪಿನಿಯ ಒಂದು ಭಾಗವನ್ನು ಹೆಗಲ ಮೇಲಕ್ಕೆ ಸರಿಸಿ ನಿಂತು ರವರವನೆ ೧೮ ರ ಹರೆಯದ ಹುಡುಗರ ಉತ್ಸಾಹಕ್ಕೆ ಮೀರಿ ಕಲ್ಲನ್ನು ಉರುಳಿಸುತ್ತಿದ್ದರು. ಆ ಕಲ್ಲುಗಳು ಡಿಕ್ಕಿ ಹೊಡೆಯುತ್ತಿದ್ದ ಶಬ್ದ ಆ ಕಾಯಕದ ಚಿಲುಮೆ ಇಂದಿಗೂ ಚಿಮ್ಮುತ್ತಿದೆ. ದೊಡ್ಡ ಹುಡುಗರು ಒಂದೊಂದು ಕಲ್ಲನ್ನು ತಮ್ಮ ತಲೆ ಮೇಲೆ ಸಣ್ಣ ಹುಡುಗರು ಜಲ್ಲಿ ಮಾಡಲು ಉಪಯೋಗವಾಗುವಂತಹ ಒಂದು ಅಥವಾ ಎರಡು ಸಣ್ಣ ಕಲ್ಲುಗಳನ್ನು ತಮ್ಮ ಎರಡೂ ಕೈಗಳಲ್ಲಿ ಅಥವಾ ಹೆಗಲ ಮೇಲೆ ತಂದು ಇಂದಿನ ಸಂಸ್ಕೃತ ಪಾಠಶಾಲೆಯ ಕಟ್ಟಡವಿರುವ ಭಾಗದಲ್ಲಿ ಸಂಗ್ರಹಿಸುತ್ತಿದ್ದರು.







''ಬಿತ್ತಿಹರು ಕಾಯಕದ ಸಂದೇಶವನ್ನು ನಮ್ಮ ಗುರುಗಳು ಶ್ರೀಮಠದ ಕಟ್ಟಡಗಳ ಒಂದೊಂದು ಕಲ್ಲಿನಲ್ಲೂ, ಪ್ರತಿಯೊಂದು ವಿದ್ಯಾರ್ಥಿಯ ಮೈಮನದಲ್ಲಿ ಎಂದೇ'' ಹಾಡಿ ಹೇಳಿ ನಲಿಯುವ ವಿಶೇಷತೆಯ ಶ್ರಮದಾನವಾಗಿತ್ತು ಅದು.

ಸಾಮೂಹಿಕ ಪ್ರಾರ್ಥನೆ

ಶ್ರಮದಾನದ ನಂತರ ಮುಖ ತೊಳೆದು ವಿಭೂತಿ ಧರಿಸಿ ಸಾಮೂಹಿಕ ಪ್ರಾರ್ಥನೆಗೆ ಬಂದಾಗ ಇಂದಿನಂತೆಯೇ ಆಗಲೂ ಸಹ ಶ್ರೀ ಶ್ರೀಗಳವರು ಪ್ರಾರ್ಥನೆಯ ಕೇಂದ್ರ ಬಿಂದುವಾಗಿರುತ್ತಿದ್ದರು. ಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳನ್ನೊಳಗೊಂಡ ಹಾಡುಗಳನ್ನು ಹಿರಿಯ ವಿದ್ಯಾರ್ಥಿಗಳೇ ನಮಗೆ ಹೇಳಿಕೊಡುತ್ತಿದ್ದರು. ಹಾಡುವಾಗ ತಪ್ಪಾದರೆ ಸಮರಸ ವಿಲ್ಲದಿದ್ದರೆ ಶ್ರೀ ಶ್ರೀಗಳೇ ತಿದ್ದಿ ಹೇಳಿಕೊಡುತ್ತಿದ್ದರು. ಪ್ರಾರ್ಥನೆಯ ನಂತರ ಹಿತನುಡಿಗಳ ಪುಟ್ಟ ಪ್ರವಚವನ್ನು ಮಾಡುತ್ತಿದ್ದರು. ಪ್ರಾರ್ಥನೆ ಬಹುಪಾಲು ಶಿವಧ್ಯಾನವಾಗಿರುತ್ತಿತ್ತು. ಆದರೆ ನಮ್ಮ ಮುಂದೆ ಆಸೀನರಾಗಿರುತ್ತಿದ್ದ ಶ್ರೀ ಗುರುಗಳು ನಮ್ಮ ಕಣ್ಮನಗಳಲ್ಲಿ ತುಂಬಿರುತ್ತಿದ್ದರು. ಪ್ರಾರ್ಥನಾ ಸಮಾವೇಶ ಮುಗಿಯುವುದರ ಮುನ್ನ ತಪ್ಪು ಮಾಡಿದವರ ವಿರುದ್ಧ ಇದ್ದ ವರದಿಗಳನ್ನು ಪರಿಶೀಲಿಸಿ ಸೂಕ್ತ ತಿಳುವಳಿಕೆ ಅಥವಾ ಶಿಕ್ಷೆಯನ್ನು ಸಹ ಶ್ರೀಗಳೇ ವಿಧಿಸುತ್ತಿದ್ದರು.

ಮರೆಯಲಾಗದ ಘಟನೆಗಳು

ಎಂದೆಂದಿಗೂ ಮರೆಯದ ಒಂದು ಘಟನೆ. ಆ ವಿದ್ಯಾರ್ಥಿಯ ಹೆಸರನ್ನು ಮರೆತಿಲ್ಲ. ಆದರೆ ಇಲ್ಲಿ ಬರೆಯುವುದು ಬೇಡ. ಆತನ ಚಾರಿತ್ರ್ಯ ಅಸಹ್ಯವಾದದ್ದು ಎಂಬುದನ್ನು ಅಧ್ಯಾಪಕರೊಬ್ಬ ಪ್ರತ್ಯಕ್ಷದರ್ಶಿಯಾದವರು. ಶ್ರೀಗಳಿಗೆ ವರದಿ ಮಾಡಿದ್ದರಂತೆ ಅದನ್ನು ವಿಚಾರಿಸಿ ಆ ವಿದ್ಯಾರ್ಥಿಯನ್ನು ಬೆತ್ತದಿಂದ ಶ್ರೀಗಳು ಥಳಿಸಿದರು. ಬೆತ್ತ ಮುರಿಯಿತು. ಪಾದರಕ್ಷೆಯಿಂದ ಥಳಿಸಿದರು ಎಂದು ಮುಂದಿನ ಸಾಲಿನ ವಿದ್ಯಾರ್ಥಿಗಳು ಹೇಳಿದ್ದರಿಂದ ಹಿಂದೆ ಇದ್ದ 'ಚಿಕ್ಕ ಹುಡುಗ'ನಾಗಿದ್ದ ನನಗೆ ಗೊತ್ತಾಯಿತು. ವಿದ್ಯಾರ್ಥಿಗಳ ವೈಯಕ್ತಿಕ ಚಾರಿತ್ರ್ಯಕ್ಕೆ ಶ್ರೀಗಳವರು ಕೊಟ್ಟ ಮಹತ್ವ ಅಷ್ಟಾಗಿತ್ತು.

ಸಣ್ಣಪುಟ್ಟ ತಪ್ಪು ಮಾಡಿದವರಿಗೆ ಕಿವಿ ಹಿಂಡಿ ಒಂದು ಸಾರಿ ಹಗುರವಾಗಿ ಕಪಾಳಕ್ಕೆ ತಟ್ಟುತ್ತಿದ್ದರು. ಇನ್ನೂ ಹಲವರನ್ನು ವಾತ್ಸಲ್ಯದಿಂದ ಕಿವಿ ಹಿಡಿದು ಮಾತನಾಡಿಸಿ ಅವನೇನು ಮಾಡುತ್ತಿದ್ದ, ಹೇಗಿದ್ದಾನೆ, ಯಾವ ರೀತಿ ಅಂಕಗಳನ್ನು ಗಳಿಸಿದ್ದಾನೆ, ಇತ್ಯಾದಿಗಳನ್ನು ವಿಚಾರಿಸುತ್ತಿದ್ದರು. ಕಿವಿಯ ಮೃದ್ವಸ್ತಿಯನ್ನು ಮಡಿಸಿ ಲಘುವಾಗಿ ಅದುಮಿ ಹಿಡಿಯುತ್ತಿದ್ದರಿಂದ ಉಂಟಾದ ರಕ್ತಚಲನೆಯಿಂದ ಕಿವಿ ಕೆಂಪಾಗುತ್ತಿತ್ತಲ್ಲದೆ ಹಲವು ದಿನಗಳವರೆಗೆ ಒಂದು ವಿಧವಾದ ನೋವಲ್ಲ, ಭಾವನೆ ಕಿವಿಯಲ್ಲಿ ತುಂಬಿ ಬರುತ್ತಿತ್ತು. ಅದು ಒಂದು ವಿಧವಾದ 'ಇನಾಕ್ಯುಲೇಷನ್' ಎಂದೇ ಹೇಳ ಬಹುದು.

ನಾನು ತಪ್ಪು ಮಾಡಿ ಅಂತಹ ಇನಾಕ್ಯುಲೇಷನ್ ಯಾವತ್ತೂ ಪಡೆಯಲಿಲ್ಲ. ಊರಿಗೆ ಹೋಗಲು ಅನುಮತಿ ಪಡೆಯಲು ಅರ್ಜಿ ಬರೆದುಕೊಂಡು ಹೋದಾಗ, ಯಾಕೆ ಹೋಗಬೇಕು ಎರಡು ದಿನ ರಜಾ ಬಂದರೆ ಇಲ್ಲೇ ಇದ್ದು ಓದುವುದನ್ನು ಬಿಟ್ಟು, ಊರಿಗೆ ಹೋಗಿ ಏನು ಮಾಡುತ್ತಿಯಾ ? ಹಬ್ಬಕ್ಕೆ ಇಲ್ಲಿ ಮಾಡಿಸುವ ಪಾಯಸದ ರುಚಿ ಸಾಲದು ಅಂತ ಹೋಗುತ್ತೀಯಾ ಎಂದು ವಾತ್ಸಲ್ಯದಿಂದ ಕಿವಿ ಹಿಡಿದು ಮಾತನಾಡಿಸುತ್ತಿದ್ದುದು ನನ್ನ ಸೌಭಾಗ್ಯವಾಗಿತ್ತು. ಅದೇಕೆ ಶ್ರೀಗಳು ಈ ರೀತಿ ಕಿವಿ ಹಿಡಿದು ಮಾತನಾಡಿಸುತ್ತಿದ್ದರು ಎಂಬ ಪ್ರಶ್ನೆಗೆ ನಾನು ಪ್ರೌಢಾ ವಸ್ಥೆಯಲ್ಲಿ ಅನೇಕ ಬಾರಿ ಉತ್ತರ ಹುಡುಕಿದಾಗಲೆಲ್ಲಾ ಸಿಕ್ಕಿದ್ದು ಒಂದೇ ಉತ್ತರ. ಅವರು ಹೇಳುವ ಬೋಧನೆಯ ಎರಡೋ ಮೂರೋ, ಮಾತಿನ ಕಡೆಗೆ ತನ್ನ ಪ್ರೀತಿಯ ವಿದ್ಯಾರ್ಥಿಯ ಗಮನವನ್ನು ಸೆಳೆಯುವುದು, ಅವನ ಕಿವಿಗೆ ಬೋಧನೆಯನ್ನು ತುಂಬುವುದು. ಅದನ್ನು ಹತ್ತಾರು ಬಾರಿ ಪಡೆದು ಹಗುರವಾಗಿ ತಿಳಿದವರೂ ಇದ್ದಾರೆ, ಅದನ್ನು ಪರಿಗಣಿಸಿ ಕಿವಿ ತುಂಬ ತುಂಬಿಕೊಂಡವರೂ ಇದ್ದಾರೆ.

ಶ್ರೀಗಳ ಕಾರುಣ್ಯ ದೃಷ್ಟಿ

ಜ್ಞಾನ ದಾಸೋಹಿ ಪರಮ ಗುರುವಿನ ಕರುಣಾಮೃತ ಧಾರೆಗೆ ಕಿವಿಯೇ ಸೂಕ್ತ ಮಾರ್ಗವೆಂದೆನಿಸುತ್ತದೆ. ಶ್ರೀಗಳ ನಡೆ-ನುಡಿಗಳ ಮೆಲುಕಿನ ಸವಿ ನಮ್ಮೆಲ್ಲರ ಬದುಕಿನಲ್ಲಿ ಇಂದಿಗೂ ಏತಕ್ಕೆ ಎಂದೆಂದಿಗೂ ಹರಡಿದೆ.

ಪ್ರತಿ ಭಾನುವಾರ ಚರ್ಚಾಸ್ಪರ್ಧೆ ಇತ್ಯಾದಿ ಕಾರ್ಯಕ್ರಮ. ಅವುಗಳಲ್ಲಿ ಶ್ರೀಗಳು ಉಪಸ್ಥಿತರುತ್ತಿದ್ದರು. ಕಾಲೇಜು ವಿದ್ಯಾರ್ಥಿಗಳೇ ಅದರಲ್ಲಿ ಹೆಚ್ಚು ಭಾಗವಹಿಸುತ್ತಿದ್ದರೂ, ನಮಗೆಲ್ಲ ಅದೊಂದು ಪಾಠದ ಸಮಾವೇಶವೇ ಆಗಿರುತ್ತಿತ್ತು. ಆ ರೀತಿ ನಡೆದ ಒಂದು ಚರ್ಚಾಸ್ಪರ್ಧೆಯ ನಿಗದಿತ ಚರ್ಚಾಸ್ಪರ್ಧಿಗಳ ಸರದಿ ಮುಗಿದ

ನಂತರ ಬೇರೆ ಯಾರಾದರೂ ಭಾಗವಹಿಸಲೂ ಇಷ್ಟವಿದ್ದರೆ ಭಾಗವಹಿಸಬಹುದೆಂದು ಶ್ರೀಗಳು ಅಪ್ಪಣೆಯನ್ನು ಘೋಷಿಸಿದರು, ನನಗೆ ಭಾಗವಹಿಸಬೇಕೆಂಬ ಆಸೆ. ಆದರೆ ನಾನೆಲ್ಲಿ ನಗೆಪಾಟಲಿಗೆ ಈಡಾಗುತ್ತೇನೋ ಎಂಬ ಭಯ. ನನ್ನ ಹಿಂದೆ ಕುಳಿತಿದ್ದ ಒಬ್ಬ ತುಂಟ ಹುಡುಗ ನನ್ನನ್ನು ಮುಂದಕ್ಕೆ ನೂಕಿದ. ನಾನು ಸ್ವಲ್ಪ ಮುಗ್ಗರಿಸಿದ್ದನ್ನು ಗಮನಿಸಿದ ನಿರ್ವಾಹಕರು ಬಾ ಮಾತನಾಡು ಎಂದು ಪ್ರೋತ್ಸಾಹಿಸಿದರು. ನಾನು ಚರ್ಚೆಗೆ ಇದ್ದ ವಿಷಯದ ಬಗ್ಗೆ ಚೆನ್ನಾಗಿ ಮಾತನಾಡಿದೆ ಎಂದು ಕಾಣುತ್ತದೆ. ಅಲ್ಲಿಯವರೆಗೆ ನೂರಾರು ಹುಡುಗರಲ್ಲಿ ಒಬ್ಬನಾಗಿದ್ದ ನನ್ನ ಮೇಲೆ ಅಂದು ಶ್ರೀಗಳ ವಿಶೇಷ ಗಮನ ಹರಿಯಿತು ಎಂದು ನನ್ನ ಅನಿಸಿಕೆ. ಆ ಚರ್ಚೆಯಲ್ಲಿ ಶ್ರೀಗಳವರ ಮೆಚ್ಚುಗೆ ಪಡೆದದ್ದು ನನ್ನನ್ನು ಎಲ್ಲಿಗೆ ಏರಿಸಿತು ಎಂದರೆ ಮುಂದಿನ ದಿನಗಳಲ್ಲಿ ನಾನು ಅಂತರಶಾಲಾ ಚರ್ಚಾಕೂಟಗಳಲ್ಲಿ ನಮ್ಮ ಶಾಲೆಯನ್ನು ಪ್ರತಿನಿಧಿಸಿ ಪಾರಿತೋಷಕಗಳನ್ನು ಗಳಿಸಿದೆನಲ್ಲದೇ ನನ್ನ ವ್ಯಕ್ತಿತ್ವವೇ ಬದಲಾಯಿತು. ನನ್ನಲ್ಲಿ ವಿಶೇಷವಾದ ಒಂದು ಪ್ರತಿಭೆ ಇದೆ ಎಂಬ ಅರಿವು ಮೂಡಿತು. ಚಿಕ್ಕ ಹುಡುಗರ ಶ್ರೇಣಿಯಲ್ಲೇ ಇರುತ್ತಿದ್ದ ನಾನು ಎದ್ದು ಕಾಣುತ್ತಿದ್ದೇನೆ ಎಂಬ ಭಾವನೆ ಬೆಳೆಯಿತು. ನಾನು ಬಡ ಕುಟುಂಬದವ. ನನ್ನ ವಿದ್ಯಾಭ್ಯಾಸ ಮುಂದುವರಿಸಬಲ್ಲೆನೋ, ಇಲ್ಲವೋ ಎಂಬ ಚಿಂತೆ ನನ್ನನ್ನು ಕಾಡಿಸುತ್ತಿದ್ದುದು ಕ್ರಮೇಣ ಅಳಿಸಿ ಹೋಯಿತು, ಅಷ್ಟೇ ಅಲ್ಲ ಗುರುವಿನ ಕರುಣೆ ನನ್ನ ಮೇಲೆ ಇದೆ, ಏನನ್ನಾದರೂ ಸಾಧಿಸಬಲ್ಲೆ ಎಂಬ ಚೈತನ್ಯದ ಚಿಲುಮೆ ನನ್ನನ್ನು ಹೆಚ್ಚು ಹೆಚ್ಚು ಮಜಲಿಗೆ ಕೊಂಡು ಹೋಯಿತು.

ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಿಗೆ ವಿದ್ಯಾರ್ಥಿ ವೇತನವನ್ನು ಕೊಟ್ಟು ಕಾಲೇಜು ವಿದ್ಯಾಭ್ಯಾಸಕ್ಕೆ ನೆರವಾಗುವ ಯೋಜನೆ ಹೊಸದಾಗಿ ಬಂದಿತ್ತು. ಮುಂದಿನ ವರ್ಷದ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯನ್ನು ಗಳಿಸಬೇಕೆಂಬ ಆಸೆಯಿಂದ ಹೈಸ್ಕೂಲ್ ಎರಡನೇ ತರಗತಿಯಲ್ಲಿದ್ದಾಗಲೇ ಕ್ರಿಸ್‌ಮಸ್ ಮತ್ತು ಬೇಸಿಗೆ ರಜಕ್ಕೆ ಊರಿಗೆ ಹೋಗದೆ ಶ್ರೀಮಠದಲ್ಲೇ ಉಳಿದೆ. ಸರದಿ ಪ್ರಕಾರ ದೇವರಾಯಪಟ್ಟಣದ ಹತ್ತಿರ ಇದ್ದ ಗದ್ದೆಗೆ ಹಕ್ಕಿಗಳು ಬಂದು, ಹಾಲು ತುಂಬಿದ ತೆನೆಯನ್ನು ತಿನ್ನದಂತೆ ನೋಡಿಕೊಳ್ಳಲು 'ಹಾಹೂ ಹಾಹೂ' ಎಂದು ಕೂಗುವುದು, ಡಬ್ಬ ಬಡಿಯುವುದು ಚಿಕ್ಕ ಹುಡುಗರಾದ ನಮ್ಮ ಪಾಲಿನ ಕೆಲಸವಾಗಿತ್ತು. ಜೊತೆ ಜೊತೆಗೆ ತಂಪಾದ ಮರದ ನೆರಳಿನಲ್ಲಿ ಕುಳಿತು ಗಟ್ಟಿಯಾಗಿ ಓದಿ ಕಂಠಪಾಟ ಮಾಡುವುದು ಇತ್ಯಾದಿ ಅಧ್ಯಯನದಲ್ಲಿಯೂ ನಿರತರಾಗುತ್ತಿದ್ದೆವು. ಶ್ರೀಗಳು ಬಹುತೇಕ ಸಂಜೆಗೆ ಮುನ್ನ ಗದ್ದೆ ಕಡೆಗೆ ಬರುತ್ತಿದ್ದರು. ಅಂದಿನ ದಿನಗಳಲ್ಲಿ ನೀರೆತ್ತುವ ಯಂತ್ರದ ಬಳಕೆ ಶ್ರೀಮಠದ ಗದ್ದೆಗಳಿಗೆ ಇರಲಿಲ್ಲ. ಕಾಲುವೆಯ ನೀರು ಕೆಳಮಟ್ಟದಲ್ಲಿ ಸಂಗ್ರಹವಾಗಿದ್ದನ್ನು ಗದ್ದೆಗೆ ಹರಿಸಬೇಕಾದರೆ ಇದ್ದ ಸಾಧನವೆಂದರೆ 'ಗೂಡೆ' ಹಾಕುವುದು.

'ಗೂಡೆ' ಈಗಿನ ಪೀಳಿಗೆಗೆ ಕಂಡರಿಯದ ಸಾಧನವೇ ಹೌದು. ಈಗ ಬಳಕೆಯಲ್ಲಿರುವ ಸೀಮೆ ಎಣ್ಣೆ ಡಬ್ಬದಂತಿರುವ ಸುಮಾರು ೨೦-೩೦ ಲೀಟರ್‌ನಷ್ಟು ನೀರನ್ನು ತುಂಬಬಹುದಾದ ಡಬ್ಬಕ್ಕೆ ಎರಡೂ ಕಡೆ ಸಮತೋಲನವನ್ನು ಕೊಡುವಂತೆ ಹಗ್ಗಗಳನ್ನು ಕಟ್ಟಿ, ನೀರು ಸಂಗ್ರಹವಾಗಿರುವ ಗುಂಡಿಯ ಎರಡೂ ಕಡೆ ಒಬ್ಬೊಬ್ಬರು ನಿಂತು, ಡಬ್ಬವನ್ನು ನೀರಿನಲ್ಲಿ ಮುಳುಗಿಸಿ, ಡಬ್ಬ ತುಂಬುತ್ತಿದ್ದಂತೆಯೇ ನೀರನ್ನು ಮೇಲಕ್ಕೆ ಎಸೆಯುವುದರ ಮೂಲಕ ಗದ್ದೆಗೆ ನೀರು ಹಾಯಿಸುತ್ತಿದ್ದರು. ಈ ರೀತಿ ಗೂಡೆ ಹಾಕುವುದು ಅತ್ಯಂತ ಶ್ರಮ ಮತ್ತು ಸಮರಸದ ನೈಪುಣ್ಯತೆಯಿಂದ ಮಾಡುವ ಕೆಲಸವಾಗಿತ್ತು. ಶ್ರೀಗಳು ಒಂದು ಕಡೆ ಹಗ್ಗ ಹಿಡಿದು ನಿಂತರೆ ಇನ್ನೊಂದು ಕಡೆ ದೊಡ್ಡ ಹುಡುಗರ ಪೈಕಿ ಒಬ್ಬರು ಹಗ್ಗ ಹಿಡಿಯುತ್ತಿದ್ದರು. ಹಾಗೆ ಸರದಿ ಪ್ರಕಾರ ಎರಡು ಮೂರು ಹುಡುಗರು ಆಯಾಸವಾಗುವವರೆಗೆ ಶ್ರೀಗಳು ಗೂಡೆಯನ್ನು ಎಳೆಯುವ ಸಾಮರ್ಥ್ಯವನ್ನು ಪಡೆದಿದ್ದರು. ಅದೊಂದು ಶ್ರಮದಾನವಲ್ಲ, ಚೆಲ್ಲಾಟವೆಂಬಂತೆ ಈ ಕಾಯಕ ಜರುಗುತ್ತಿತ್ತು. ಹೀಗೆ ಒಂದಲ್ಲ, ಹತ್ತಾರು ಚಟುವಟಿಕೆಗಳು, ಜಾತ್ರೆಯ ವೇಳೆ ಮಂಕರಿ ಹೊತ್ತು ಭಕ್ತಾದಿಗಳಿಗೆ ಊಟ ಬಡಿಸುವುದಾಗಲೀ, ಹೊಲದಲ್ಲಿ ಹೊರೆಕಟ್ಟಿ ಹೊಕ್ಕಣೆಗೆ ಹುಲ್ಲು ಸಾಗಿಸುವುದಾಗಲೀ, ಜಾತ್ರೆಯ ನಂತರದ ದಿನಗಳಲ್ಲಿ ಗೊಬ್ಬರವನ್ನು ಸಂಗ್ರಹಿಸುವುದಾಗಲಿ, ಶ್ರೀಗಳು ತಮ್ಮ ಬೆವರು ಸುರಿಸಿ ನಮ್ಮನ್ನು ಕಾಯಕದ ಚೆಲ್ಲಾಟದಲ್ಲಿ ತೊಡಗಿಸಿ ಶುದ್ಧ ಕಾಯಕದ ಸೊಬಗನ್ನು ಹರಡಿದರು. ಕಾಯಕದ ಮಹಿಮೆಯ ಮುದ್ರೆಯನ್ನು ಒತ್ತಿದರು.

**ಶ್ರೀಗಳವರ ಅಂತಕರುಣೆ**

ಎಸ್.ಎಸ್.ಎಲ್.ಸಿ. ಪರೀಕ್ಷೆ ಹಲವು ತಿಂಗಳಿದ್ದಂತೆ ಶ್ರೀಕ್ಷೇತ್ರವನ್ನು ಬಿಟ್ಟು ತುಮಕೂರಿನಲ್ಲಿದ್ದ ನಮ್ಮ ತಂದೆಯವರ ಮನೆಯಲ್ಲಿದ್ದು ಅಧ್ಯಯನ ಮತ್ತು ಉಪಾಧ್ಯಾಯರ ವಿಶೇಷ ಮಾರ್ಗದರ್ಶನ ಪಡೆದು ಪ್ರಥಮ ದರ್ಜೆಯಲ್ಲಿ





ಉತ್ತೀರ್ಣನಾದೆ. ಆಗಲೂ ಮತ್ತು ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿಯೂ ಸಹ ಶ್ರೀಕ್ಷೇತ್ರದ ನೀರು ನೆರಳೇ ನನ್ನ ಚೈತನ್ಯದ ಚಿಲುಮೆ. ಆ ವೇಳೆಗೆ ನಮ್ಮ ತಂದೆಯವರೂ ಸಹಾ ಶ್ರೀ ಶ್ರೀಗಳವರ ಕೃಪೆಗೆ ಪಾತ್ರರಾಗಿ ಶಾಲೆಯ ಸೇವೆಯಲ್ಲಿ ತೊಡಗಿದ್ದರು. ಜಾತ್ರೆ ಇತ್ಯಾದಿ ಸಂದರ್ಭಗಳಲ್ಲಿ ಶ್ರೀಕ್ಷೇತ್ರ ಕೈಬೀಸಿ ಕರೆಯುತ್ತಿತ್ತು. ೧೯೬೧ರಲ್ಲಿ ಬಿ.ಎ. ಎರಡನೆ ದರ್ಜೆಯಲ್ಲಿ ಪಾಸು ಮಾಡಿ ಮೈಸೂರಿನಲ್ಲಿ ಎಂ.ಎ. ಅಧ್ಯಯನ ಮಾಡುವ ಆಕಾಂಕ್ಷೆ ವ್ಯಕ್ತಪಡಿಸಿದಾಗ ಶ್ರೀ ಶ್ರೀಗಳು ಹೇಳಿದ್ದು ಇಷ್ಟೇ. "ಎಂ.ಎ. ಓದಿದರೆ ಫಸ್ಟ್ ಕ್ಲಾಸ್ ಬಂದರೆ ಭವಿಷ್ಯ ಚೆನ್ನಾಗಿರುತ್ತದೆ, ಕೇವಲ ಸಾಧಾರಣ ದರ್ಜೆಯಲ್ಲಿ ಪಾಸಾದರೆ ಎ.ಜಿ. ಆಫೀಸಿನಲ್ಲಿ ಪ್ರಥಮ ದರ್ಜೆ ಗುಮಾಸ್ತನ ಕೆಲಸ ಮಾತ್ರ ಗ್ಯಾರಂಟಿ (ಈಗಂತೂ ಅದೂ ಕಷ್ಟ). ಆಗಿನ ಸುತ್ತೂರು ಜಗದ್ಗುರುಗಳಾದ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳಿಗೆ ಪತ್ರವನ್ನು ಬರೆದು ಉಚಿತ ವಿದ್ಯಾರ್ಥಿನಿಲಯದಲ್ಲಿ ಅವಕಾಶವನ್ನು ಕಲ್ಪಿಸಬೇಕೆಂದು ಶಿಫಾರಸ್ಸು ಮಾಡಿದ್ದರಿಂದ ನಾನು ಜಗದ್ಗುರುಗಳ ಕೃಪೆಗೂ ಪಾತ್ರನಾದೆ. ಎಂ.ಎ. ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್‌ನಲ್ಲಿ ಉತ್ತೀರ್ಣನಾದಾಗ ಶಾಲೆಯಲ್ಲಿ ಮೊದಲ ಬಾರಿಗೆ ದೊರೆತ ಪಾರಿತೋಷಕವನ್ನು ತನ್ನ ತಾಯಿಗೆ ತೋರಿಸಲು ಮಗು ಎಷ್ಟು ಕಾತುರತೆಯಿಂದ ಇರುತ್ತದೆಯೋ ಅಷ್ಟೇ ಕಾತುರತೆಯಿಂದ ತಿಳಿಸಿದೆ. ನಂತರದ ದಿನಗಳಲ್ಲಿ ಉಪನ್ಯಾಸಕರ ಹುದ್ದೆಗೆ ಬರೆದಿದ್ದ ಅರ್ಜಿಯನ್ನು ಶ್ರೀಗಳಿಗೆ ತೋರಿಸಿದೆ. ಅದರಲ್ಲಿ ನಾನು ಮಾಡಿದ ಎರಡು ತಪ್ಪನ್ನು ಶ್ರೀಗಳು ತಿದ್ದಿ ಕೊಟ್ಟರು. ಆ ತಿದ್ದುಪಡಿ ಕೇವಲ ಮಾಡಬೇಕೆಂದು ಮಾಡಿದ ತಿದ್ದುಪಡಿಯಾಗಿರಲಿಲ್ಲ. ಬಹಳ ಸೂಕ್ಮವಾದ ತಪ್ಪಾಗದಿದ್ದರೂ ಆ ತಪ್ಪುಗಳನ್ನೊಳಗೊಂಡ ಅರ್ಜಿಯನ್ನು ನಾನು ಹಾಗೆಯೇ ರವಾನಿಸಿದ್ದಲ್ಲಿ ಅದನ್ನು ನೋಡಿದವರಿಗೆ ಉತ್ತಮ ಅಭಿಪ್ರಾಯ ಬರುತ್ತಿರಲಿಲ್ಲ. ಪ್ರಥಮ ಶ್ರೇಣಿಯಲ್ಲಿ ಎಂ.ಎ. ಪಾಸ್ ಮಾಡಿ ಬಂಗಾರದ ಪದಕವನ್ನು ಪಡೆಯುವ ಹಂತದಲ್ಲಿದ್ದಾಗಲೂ ಸಹ ಶ್ರೀಗಳವರ ಅಂತರಂಗದ ಆಳದಲ್ಲಿ ನನ್ನಂತಹವರ ವ್ಯಕ್ತಿತ್ವದ ನಿರೂಪಣೆಯ ಬಗ್ಗೆ ಅವರಿಗಿದ್ದ ಸೂಕ್ಷ್ಮಾತಿ ಸೂಕ್ಷ್ಮ ಆಸಕ್ತಿಯ ದ್ಯೋತಕವಲ್ಲವೇ ಇದು ?

**ಶ್ರೀಗಳವರ ಆಶೀರ್ವಾದ**

'ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಮತ್ತಾರಿಲ್ಲವಯ್ಯಾ' ಎಂದು ಅಣ್ಣ ಬಸವಣ್ಣನವರು ಬಣ್ಣಿಸಿರುವಂತೆ ಶ್ರೀಗಳು ನಾಡಿನ ಲಕ್ಷೋಪ ಲಕ್ಷ ಮಕ್ಕಳಿಗೆ ತಂದೆ, ತಾಯಿ, ಬಂಧು ಬಳಗ ಎಲ್ಲವೂ ಆಗಿ ಅವರ ವ್ಯಕ್ತಿತ್ವವನ್ನು ನಿರೂಪಿಸಿದ ಮತ್ತು ನಿರೂಪಿಸುತ್ತಿರುವ ಶಿಲ್ಪಿಯಾಗಿದ್ದಾರೆ. ಆ ಮಹಾನ್ ಶಿಲ್ಪಿಯ ಕಲಾಕೃತಿಗಳಲ್ಲಿ ನಾನೂ ಒಬ್ಬ. ಅವರೆಲ್ಲರ ಅನುಭವ ಅನಿಸಿಕೆಗಳೂ ರೋಮಾಂಚನವನ್ನುಂಟು ಮಾಡು ವಂತಹವು. ಅವರೆಲ್ಲರ ಜೀವನದಲ್ಲಿ ಆಗಿರುವ ಪರಿವರ್ತನೆಯನ್ನು ಸಂಶೋಧಕರ ಅಂಕಿ ಅಂಶಗಳಿಂದ ಅಳೆದರೆ ಮಹಾನ್ ಮಂತ್ರಪುರುಷರು ಈ ನಾಡಿನ ಉದ್ಧಗಲ ಮಾಡಿರುವ ಆರ್ಥಿಕ ಹಾಗೂ ಸಾಮಾಜಿಕ ಪರಿವರ್ತನೆಯ ರೂಪರೇಷೆಗಳು ಸ್ಪಷ್ಟವಾಗುತ್ತವೆ. ನಾನು ಅಖಿಲ ಭಾರತ ಸ್ಪರ್ಧಾತ್ಮಕ ಸೇವಾ ಪರೀಕ್ಷೆಯನ್ನು ಬರೆದಿದ್ದು, ಭಾರತೀಯ ಪೋಲೀಸ್ ಸೇವೆಗೆ (ಐ.ಪಿ.ಎಸ್) ಆಯ್ಕೆಯಾಗಿ ಕರ್ತವ್ಯ ನಿರ್ವಹಿಸಿದ್ದು, ಜೀವನದಲ್ಲಿ ಅಳವಡಿಸಿಕೊಂಡ ಮೌಲ್ಯಗಳು ಅನುಭವಿಸಿದ ಆನಂದ ಎಲ್ಲವೂ ಆಯಾ ಸಂದರ್ಭಗಳಲ್ಲಿ ಶ್ರೀಗಳವರ ಆಶೀರ್ವಾದ ಸ್ಪರ್ಶದಿಂದಲೇ ಆದವು. ಅವುಗಳ ವಿವರ ಇನ್ನೂ ರೋಮಾಂಚಕಾರಿ. ಅವು ಇನ್ನೊಂದು ಲೇಖನದ ವಿಷಯವಾಗಬಹುದು. ಈಗ ಶ್ರೀಕ್ಷೇತ್ರದಲ್ಲಿರುವ ನನ್ನ ಕಿರಿಯ ಸಹೋದರರೊಡನೆ ಹಂಚಿಕೊಳ್ಳಬೇಕೆಂದು ನಾನು ಇಚ್ಛಿಸಿದ ಹಲವು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.



ಇಂತಹ ಸಂಸ್ಥೆ ಹಾಗೂ ಇಷ್ಟು ದೊಡ್ಡ ಸಂಖ್ಯೆಯಲ್ಲಿ ನಡೆಸತಕ್ಕ ವಿದ್ಯಾರ್ಥಿನಿಲಯ ಹಿಂದೂಸ್ಥಾನದ ಬೇರೆಲ್ಲೂ ಇರುವ ಸಂಭವ ಇಲ್ಲ. ನಾನು ಹಿಂದೂಸ್ಥಾನವನ್ನಲ್ಲದೆ ಅರ್ಧಪ್ರಪಂಚವನ್ನು ಸುತ್ತಿದ್ದೇನೆ. ಅಲ್ಲಿ ಎಲ್ಲೂ ಇಂತಹ ಸಂಸ್ಥೆ ಕಂಡು ಬರಲಿಲ್ಲ. ಶ್ರೀಗಳವರು ಸಾಕಷ್ಟು ವಯಸ್ಕರಾಗಿ, ಶರೀರ ಮುಪ್ಪಾಗಿರುವಂತೆ ಕಂಡರೂ ಅವರ ಧ್ಯೇಯ ಸಾಧನೆ, ಸಮಾಜ ಸೇವೆಯಲ್ಲಿರಬೇಕೆಂಬ ಉತ್ಸಾಹ ಎಳ್ಳಷ್ಟೂ ಕಡಿಮೆಯಾಗಿಲ್ಲ. ಯುವಕರಿಗಿಂತ ಯುವಕರಾಗಿ ದುಡಿಯುವ ಶಕ್ತಿ ಸಾಹಸ ಸ್ಪಷ್ಟವಾಗಿ ಕಾಣುತ್ತಿದೆ.

- ಎಸ್. ನಿಜಲಿಂಗಪ್ಪನವರು, ರಾಷ್ಟ್ರನಾಯಕರು



# ಉದಾರ ಹೃದಯಶ್ರೀ

ಡಿ.ಎಂ. ಚಂದ್ರಶೇಖರ್
ನಿವೃತ್ತ ಮುಖ್ಯ ನ್ಯಾಯಮೂರ್ತಿಗಳು
ಕರ್ನಾಟಕ ಉಚ್ಛನ್ಯಾಯಾಲಯ, ಬೆಂಗಳೂರು



ಬಸವಣ್ಣನವರಲ್ಲಿದ್ದಂತೆ ಪೂಜ್ಯ ಡಾ: ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಲ್ಲಿಯೂ ಆಧ್ಯಾತ್ಮ ಸಾಧನೆ ಮತ್ತು ಮಾನವ ಸೇವೆ ಇವುಗಳ ಅಪೂರ್ವ ಸಂಗಮ ಮತ್ತು ಸಮನ್ವಯಗಳಿವೆ.

ಶ್ರೀ ಶ್ರೀಗಳ ಆಧ್ಯಾತ್ಮ ಸಾಧನೆಯ ಬಗ್ಗೆ ಹೆಚ್ಚು ಹೇಳಲು ನಾನು ಸಮರ್ಥನಲ್ಲ. ೮,೦೦೦ ಕ್ಕೆ ಹೆಚ್ಚಿನ ಬಡ ವಿದ್ಯಾರ್ಥಿಗಳಿಗೆ ಉಚಿತ ವಸತಿ ಮತ್ತು ಪ್ರಸಾದಗಳ ಮತ್ತು ಸುಮಾರು ೧೦೦ ವಿದ್ಯಾಸಂಸ್ಥೆಗಳ ನಿರ್ವಹಣೆಯ ಜವಾಬ್ದಾರಿಯನ್ನು ಹೊತ್ತಿದ್ದರೂ ಕರೆದ ಭಕ್ತರ ಮನೆಗಳಿಗೆ ಹೋಗಿ ಬರುವ ಮತ್ತು ಆಹ್ವಾನ ನೀಡಿದ ಸಭೆ ಸಮಾರಂಭಗಳಲ್ಲಿ ಭಾಗವಹಿಸುವ ಬಿಡುವಿಲ್ಲದ ಕಾರ್ಯಕ್ರಮಗಳಿದ್ದರೂ ಶ್ರೀ ಶ್ರೀಗಳವರು ತ್ರಿಕಾಲ ಶಿವಪೂಜೆಯನ್ನು ನಿರಂತರವಾಗಿ ಪಾಲಿಸಿಕೊಂಡು ಬಂದಿದ್ದಾರೆ. ಪರಸ್ಥಳದಿಂದ ತಮ್ಮ ಮಠಕ್ಕೆ ಹಿಂತಿರುಗುವಾಗ ರಾತ್ರಿ ೧೧-೧೦ ಗಂಟೆಯಾದರೂ ಶಿವಪೂಜೆಯನ್ನು ಮಾಡಿ ಪುನಃ ಮಾರನೆಯ ದಿನ ಬೆಳಿಗ್ಗೆ ೨-೩೦ ಗಂಟೆಗೆ ಎದ್ದು ಶಿವಪೂಜೆಯನ್ನು ಮಾಡುತ್ತಾರೆ.

ಸಭೆ ಸಮಾರಂಭಗಳಲ್ಲಿ ಮಾತನಾಡಲು ಅವಕಾಶ ಸಿಕ್ಕಿದಾಗಲೆಲ್ಲಾ ಪೂಜ್ಯ ಶ್ರೀ ಶ್ರೀಗಳವರು ಆಧ್ಯಾತ್ಮ ಸಾಧನೆಯ ಮಹತ್ವವನ್ನು ಒತ್ತಿ ಒತ್ತಿ ಹೇಳುತ್ತಾರೆ. ಬಸವಣ್ಣನವರ ಬಗ್ಗೆ ಎಷ್ಟು ಹೇಳಿದರೂ ಶ್ರೀ ಶ್ರೀಯವರಿಗೆ ತೃಪ್ತಿಯಿಲ್ಲ.

ತಾವು ಶರಣ ಧರ್ಮ ಅನುಯಾಯಿಗಳಾಗಿ ಇಷ್ಟಲಿಂಗಾರ್ಚನೆಯೇ ತಮ್ಮ ದೈವಾರಾಧನೆಯ ಮಾರ್ಗ ವಾದರೂ ಶ್ರೀ ಶ್ರೀಯವರು ದೈವಾರಾಧನೆಯ ಇತರ ಮಾರ್ಗಗಳ ಬಗ್ಗೆ ಸಹನೆಯುಳ್ಳವರಾಗಿದ್ದಾರೆ. ಆದ್ದರಿಂದಲೇ ದೇವಸ್ಥಾನಗಳ ಉದ್ಘಾಟನೆ ಮತ್ತು ವಿಗ್ರಹಗಳ ಪ್ರತಿಷ್ಠಾಪನೆ ಸಮಾರಂಭಗಳಿಗೆ ಆಹ್ವಾನ ಬಂದರೆ ಅವುಗಳಲ್ಲಿ ಪಾಲ್ಗೊಳ್ಳುತ್ತಾರೆ. ದೇವಸ್ಥಾನಗಳ ಉದ್ಘಾಟನೆ ಮತ್ತು ವಿಗ್ರಹಗಳ ಪ್ರತಿಷ್ಠಾಪನೆಗಳಲ್ಲಿ ಶ್ರೀಗಳು ಪಾಲ್ಗೊಳ್ಳುವುದನ್ನು ಕೆಲವು ಶರಣ ಧರ್ಮದ ಅನುಯಾಯಿಗಳು ಟೀಕಿಸಿದ್ದಾರೆ. ನಾಸ್ತಿಕತೆ ಹೆಚ್ಚುತ್ತಾ ದೈವಭಕ್ತಿಯು ಕಡಿಮೆಯಾಗುತ್ತಿರುವ ಈಗಿನ ಕಾಲದಲ್ಲಿ





ದೈವಭಕ್ತಿಯು ಬೆಳೆಯುವ ಯಾವ ಮಾರ್ಗವೇ ಆಗಲೀ ಅದಕ್ಕೆ ಪ್ರೋತ್ಸಾಹ ನೀಡಬೇಕೆಂದು ಪರಮ ಪೂಜ್ಯರ ಉದಾರ ಭಾವನೆ.

ಶ್ರೀ ಶ್ರೀಗಳ ಮಾನವ ಸೇವೆ ಮಹತ್ತರವಾದದ್ದು. ಅವರು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷತೆಯನ್ನು ವಹಿಸಿಕೊಂಡಾಗ ಆ ಮಠದ ಉಚಿತ ವಿದ್ಯಾರ್ಥಿ ನಿಲಯದಲ್ಲಿ ಕೇವಲ ಕೆಲವೇ ವಿದ್ಯಾರ್ಥಿಗಳಿದ್ದರು. ಶ್ರೀಗಳವರು ಪೀಠಾಧ್ಯಕ್ಷರಾದ ಮೇಲೆ ಈ ವಿದ್ಯಾರ್ಥಿ ನಿಲಯವನ್ನು ನಿರಂತರವಾಗಿ ವಿಸ್ತರಿಸಿದರು. ಇಂದು ಶ್ರೀ ಮಠದ ಉಚಿತ ವಿದ್ಯಾರ್ಥಿನಿಲಯದಲ್ಲಿ ೮,೦೦೦ ಕ್ಕೂ ಹೆಚ್ಚಾಗಿ ಬಡ ವಿದ್ಯಾರ್ಥಿಗಳಿದ್ದಾರೆ. ಜಾತಿ-ಭೇದ ಭಾವವಿಲ್ಲದೆ ಬಡ ವಿದ್ಯಾರ್ಥಿಗಳಿಗೆ ಈ ಉಚಿತ ವಿದ್ಯಾರ್ಥಿ ನಿಲಯದಲ್ಲಿ ಪ್ರವೇಶವಿದೆ. ಈಚೆಗೆ ಸುಮಾರು ನಾಲ್ಕು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಹೊಸದಾಗಿ ವಿದ್ಯಾರ್ಥಿ ನಿಲಯದ ಸಂಕೀರ್ಣವನ್ನು ನಿರ್ಮಿಸಲಾಯಿತು. ಈ ದಿನಗಳಲ್ಲಿ ಆಹಾರ ಪದಾರ್ಥಗಳ ಬೆಲೆಗಳು ಗಗನಕ್ಕೇರಿರುವಾಗ ಎಂಟು ಸಾವಿರಕ್ಕಿಂತ ಹೆಚ್ಚಿನ ಸಂಖ್ಯೆ ವಿದ್ಯಾರ್ಥಿಗಳಿಗೆ ಉಚಿತವಾಗಿ ಪ್ರಸಾದವನ್ನು ನೀಡುತ್ತಿರುವುದು ಒಂದು ಪವಾಡವೇ ಸರಿ.

ಪ್ರತಿವರ್ಷ ಮೇ ಮತ್ತು ಜೂನ್ ತಿಂಗಳುಗಳಲ್ಲಿ ಶಾಲಾ ಕಾಲೇಜುಗಳು ಪ್ರಾರಂಭವಾಗುವ ಸಮಯದಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದು ಅಪೂರ್ವ ದೃಶ್ಯವನ್ನು ಕಾಣಬಹುದು. ಉಚಿತ ವಿದ್ಯಾರ್ಥಿನಿಲಯಕ್ಕೆ ಸೇರಬೇಕೆಂಬ ವಿದ್ಯಾರ್ಥಿಗಳ ಮತ್ತು ಅವರ ತಂದೆ-ತಾಯಿಗಳ ಸಮೂಹ ಒಂದು ಜಾತ್ರೆಯಂತಿರುತ್ತದೆ. ಎಷ್ಟೋ ಮಂದಿ ಗ್ರಾಮಾಂತರ ಜನರು ತಮ್ಮ ಮಕ್ಕಳನ್ನು ಶ್ರೀಮಠದ ವಿದ್ಯಾಭ್ಯಾಸದಲ್ಲಿ ತೊಡಗಿಸಲು ಕಾತುರರಾಗಿರುತ್ತಾರೆ. ಶ್ರೀ ಶ್ರೀಗಳವರು ಅವರೆಲ್ಲರಿಗೂ ತಾಳ್ಮೆಯಿಂದ ಸಂದರ್ಶನ ಕೊಟ್ಟು ಅವರ ಮನವಿಯನ್ನು ಕೇಳುತ್ತಾರೆ. ಉಚಿತ ವಿದ್ಯಾರ್ಥಿ ನಿಲಯಗಳ ಸ್ಥಳಾವಕಾಶದ ಮಿತಿ ಮೀರಿದ್ದರೂ ವಿದ್ಯಾಭಿಲಾಷೆಯುಳ್ಳ ಗ್ರಾಮಾಂತರ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನಿರಾಕರಿಸಲು ಶ್ರೀ ಶ್ರೀಗಳವರಿಗೆ ಮನಸ್ಸೇ ಬಾರದು. ಹೇಗೋ ಅನುಸರಿಸಿಕೊಂಡು ಹೋಗುತ್ತಾರೆಂದು ಆ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುತ್ತಾರೆ.

ಶ್ರೀ ಶ್ರೀಯವರು ಒಂದು ಸಂಸ್ಕೃತ ವಿದ್ಯಾಲಯ, ಒಂದು ಇಂಜನಿಯರಿಂಗ್ ಕಾಲೇಜು, ಒಂದು ಶಿಕ್ಷಣ ಡಿಗ್ರಿ ಕಾಲೇಜ್, ಎರಡು ಶಿಕ್ಷಕರ ತರಬೇತಿಸಂಸ್ಥೆ, ಒಂದು ಡಿಗ್ರಿ ಕಾಲೇಜು, ಒಂದು ಮಹಿಳಾ ಕಾಲೇಜು, ಅನೇಕ ಪದವಿಪೂರ್ವ ಕಾಲೇಜುಗಳು ಮತ್ತು ತುಮಕೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಅನೇಕ ಗ್ರಾಮಾಂತರ ಹೈಸ್ಕೂಲುಗಳನ್ನು ನಡೆಸುತ್ತಿದ್ದಾರೆ. ಗ್ರಾಮಾಂತರ ಪ್ರದೇಶದ ಬಡ ಜನರು ವಿದ್ಯೆಯಲ್ಲಿ ಮುಂದುವರಿಯಬೇಕೆಂದು ಶ್ರೀ ಶ್ರೀಯವರಿಗೆ ತೀವ್ರ ಕಳಕಳಿ.

ಶ್ರೀ ಶ್ರೀಗಳವರು ಆಧ್ಯಾತ್ಮಿಕವಾಗಿ ಎಷ್ಟು ಉನ್ನತವಾಗಿದ್ದಾರೆಯೋ ಅವರ ಮಾನವೀಯತೆಯೂ ಅಷ್ಟೇ ವ್ಯಾಪಕವಾದದ್ದು.

(ಕೃಪೆ : ತೊಂಬತ್ತರ ತಪಸ್ವಿ)



*ಸ್ವಾಮಿಗಳ ಜೀವನದ ಏಕೈಕ ಧ್ಯೇಯ ಹಾಗೂ ತಪಸ್ಸಿನ ಗುರಿಯೆಂದರೆ ದಾರಿದ್ರ್ಯ ವಿನಾಶ ಮತ್ತು ಅಜ್ಞಾನ ನಿರ್ಮೂಲನ. ಅದಕ್ಕಾಗಿ ಅವರು ಎಂಥ ತ್ಯಾಗ ಬಲಿದಾನಗಳಿಗಾದರೂ ಸಿದ್ಧ. ಇದು ಅವರ ಉಜ್ವಲ ಸುನಿರ್ಮಲ ರಾಷ್ಟ್ರಪ್ರೇಮದ ಪ್ರತೀಕ. ತಮ್ಮ ಧ್ಯೇಯ ಕೈಗೂಡುವ ತನಕ ಜಗದ್ಗುರು, ನಿರಂಜನ ಪ್ರಣವಸ್ವರೂಪಿ ಮೊದಲಾದ ಬಿರುದು ಬಾವಲಿ ಪ್ರಶಸ್ತಿಗಳಾಗಲಿ, ಕಣ್ಣು ಕೋರೈಸುವ ಚಿನ್ನದ ಕಿರೀಟವಾಗಲಿ ಪ್ರಭಾವಳಿಯಾಗಲಿ, ಬೆಳ್ಳಿಯ ರಥವಾಗಲಿ, ಅಡ್ಡಪಲ್ಲಕ್ಕಿಯಾಗಲಿ, ಅಹಂಕಾರ ಸೂಚಕವಾದ ದರ್ಬಾರಾಗಲಿ ಬೇಡ, ತಾವೊಬ್ಬರು ಸಿದ್ಧಲಿಂಗೇಶ್ವರರ ವಿನಮ್ರಸೇವಕ ಎಂಬುದು ಅವರ ಅಚಲ ನಿಲವು.*

- ಡಾ. ದೇ. ಜವರೇಗೌಡ
ವಿಶ್ರಾಂತ ಕುಲಪತಿಗಳು-ಮೈಸೂರು ವಿಶ್ವವಿದ್ಯಾಲಯ



# ವಿದ್ಯಾರ್ಥಿಗಳ ಗುಡಿ ಕಟ್ಟಿದ ಶಿವಕುಮಾರ ಶ್ರೀಗಳು

ಡಾ. ಸ.ಜ. ನಾಗಲೋಟಿಮಠ
ಪ್ರಸಿದ್ಧವೈದ್ಯರು ಹಾಗೂ ಸಾಹಿತಿಗಳು
ಬೆಳಗಾಂ

ನಾನು ವಿದ್ಯಾರ್ಥಿ ಆಗಿದ್ದಾಗಿನಿಂದಲೂ ಶ್ರೀ ಶಿವಕುಮಾರ ಸ್ವಾಮಿಗಳ ಹೆಸರನ್ನು ಕೇಳುತ್ತಿದ್ದೆ. ಒಳಗಿಂದೊಳಗೆ ಈ ಶಕ್ತಿಯ ಬಗ್ಗೆ ಭಕ್ತಿ ಹೆಚ್ಚುತ್ತಲೇ ಇತ್ತು. ದರ್ಶನಭಾಗ್ಯ ದೊರೆತಿರಲಿಲ್ಲ. ಸುಮಾರು ೨೦ ವರ್ಷಗಳ ಹಿಂದೆ ಡೀನ್ ಡಾ: ಬಿ.ಎಸ್. ಜೀರಗೆಯವರು ಒಂದು ಸಲ ಮಹಾಸ್ವಾಮಿಗಳನ್ನು ಜೆ.ಎನ್. ಮೆಡಿಕಲ್ ಕಾಲೇಜಿಗೆ ಆಮಂತ್ರಿಸಿದರು. ಮೊದಲ ಸಲ ನಾನು ಅವರನ್ನು ಕಂಡದ್ದು ಆಗಲೇ. ನಂತರ ಹಲವಾರು ಸಲ ಅವರನ್ನು ಕಂಡಿದ್ದೇನೆ. ಅಪರಿಚಿತನಾಗಿ ನಮಿಸಿದ್ದೇನೆ. ಧನ್ಯನಾಗಿದ್ದೇನೆ. ಅವರ ವ್ಯಕ್ತಿತ್ವದ ಬಗ್ಗೆ ಬರೆಯುವದೆಂದರೆ ಹಿಮಾಲಯವನ್ನು ಚಿತ್ರಿಸಿದಂತೆ. ಯಾವ ಮೂಲೆಯಲ್ಲಿ ನಿಂತು ನೀವು ಹಿಮಾಲಯವನ್ನು ನೋಡಿದರೂ ಅದರ ಭವ್ಯತೆ ಹೆಚ್ಚಿದಂತೆ ಅನಿಸುವುದು. ಅಂತೆಯೇ ಶ್ರೀ ಶಿವಕುಮಾರ ಸ್ವಾಮಿಗಳವರ ವ್ಯಕ್ತಿತ್ವ; ನನಗೆ ಅನಿಸಿದ ಒಂದೆರಡು ವಿಷಯಗಳನ್ನು ಎಲ್ಲರ ಲಕ್ಷ್ಯಕ್ಕೆ ತರಲೆಂದು ಈ ಲೇಖನ ಬರೆಯುತ್ತಿರುವೆ.



## ಮಾತು ಜ್ಯೋತಿರ್ಲಿಂಗ

ಒಂದನೆಯದಾಗಿ, ಅವರ ಮಾತು. ಅದನ್ನು ಕೇಳಿದವರಿಗೆ ಅದರ ಅನುಭವ ಆಗುವುದು. ನಾವು ಹಲವಾರು ಜನರ ಮಾತುಗಳನ್ನು ಕೇಳುತ್ತೇವೆ. ಉಳಿದವರ ಮಾತುಗಳು ಕೇಳುತ್ತವೆ. ಅರ್ಥ ಆಗುತ್ತದೆ. ಶ್ರೀಗಳ ಮಾತು ಬೇರೆ. ಅವು ಕೇಳುತ್ತವೆ. ಅರ್ಥವೂ ಆಗುತ್ತದೆ. ಇದಕ್ಕಿಂತ ಹೆಚ್ಚಾಗಿ ಮಾತುಗಳು ಮೆದುಳಿನೊಳಗೆ ಖಚಿತವಾಗಿ ಕೆತ್ತಿದಂತೆ ಆಗುತ್ತದೆ. ಅವುಗಳ ಪರಿಣಾಮ ಬಹುಕಾಲ ದವರೆಗೆ ಮನದ ಮೇಲೆ ಮೂಡುತ್ತದೆ. ಅವು ಪ್ರತಿಧ್ವನಿಸುತ್ತಲೇ ಇರುತ್ತವೆ. ಮಾತಿನಲ್ಲಿಯ ಗಾಂಭೀರ್ಯ ವನ್ನು ಅನುಭವಿಸಬೇಕೇ ವಿನಃ ಬೇರೊಂದು ಮಾರ್ಗವಿಲ್ಲ. ಅವರು ಮಾತನಾಡುವಾಗ ಬಹಳ ಎತ್ತರವಾದ ವ್ಯಕ್ತಿ. ಮೇಲಿನಿಂದ ಮಾತಾಡಿದ ಅನುಭವ ಬರುವುದು. ನಿಜವಾಗಿಯೂ ಸ್ವಾಮಿಗಳ ಎತ್ತರ ದೈಹಿಕ ಎತ್ತರವಲ್ಲ. ಅದರ ನೂರುಪಟ್ಟು ಎತ್ತರ ಅವರ ವ್ಯಕ್ತಿತ್ವಕ್ಕೆ ಇದೆ. ಮಾತುಗಳು ಆ ಎತ್ತರದಿಂದ ಆ ಎತ್ತರದಲ್ಲಿ ಬರುವವು. ಅದರ ಅನುಭವವೇ ಬೇರೆ.

ಎರಡನೆಯ ಸಂಗತಿ, ನನಗೆ ಸಿದ್ಧಗಂಗಾ ಕ್ಷೇತ್ರದಲ್ಲಿ ಆದ ಅನುಭವ. ಅದೊಂದು ಬೇರೆ ಲೋಕವೇ ನಿಜ. ಸಾವಿರಾರು ಎಳೆಯರು ಓಡಾಡುತ್ತಿರುತ್ತಾರೆ. ತಮ್ಮ ತಮ್ಮ ಕಾರ್ಯದಲ್ಲಿ ಮಗ್ನರಾಗಿರುತ್ತಾರೆ. ಓದು ಬರಹ ತಯಾರಿಯಲ್ಲಿ ಮುಳುಗಿರುತ್ತಾರೆ. ಮುಗ್ಧ ಮುಖ. ಮುಖದ ತುಂಬ ಕಳೆ. ಮಿಂಚುತ್ತಿರುವ ಕಣ್ಣು. ನಿರ್ಮಲವಾದ ಮನಸ್ಸು. ಯಾವುದೇ ತರದ ಅಹಂ, ದುಷ್ಟ ವಿಚಾರ, ಸ್ವಾರ್ಥ ಸ್ವಭಾವಗಳಿಗೆ ಅಲ್ಲಿ ನೆಲೆ ಇಲ್ಲ. ಅವರನ್ನು ನೋಡಿದರೆ ಸಾಕು. ದೇವರು ಇಲ್ಲಿಯೇ ಒಂದು ಕಡೆಗೆ ಇರುವವನಲ್ಲ ಎಂಬ ಭಾವನೆ ಹುಟ್ಟುತ್ತದೆ. ಅವರನ್ನು ನೋಡಿದೊಡನೆ ನೋಡುವವರ





ಮನಸ್ಸೂ ನಿರ್ಮಲ ವಾಗುತ್ತದೆ. ಮುಖವೂ ಅರಳುತ್ತದೆ. ಅಲ್ಲಿ ಓಡಾಡುವ ಮಕ್ಕಳನ್ನು ನೋಡಿದರೆ ನಾಡಿನ ಶಕ್ತಿಯ ಅರಿವು ಮೂಡುತ್ತದೆ. ಇಂದು ಅವು ಮಕ್ಕಳು ನಿಜ. ಆದರೆ ಇನ್ನು ಹತ್ತು-ಇಪ್ಪತ್ತು ವರ್ಷಗಳಲ್ಲಿ ಇವೇ ಮಕ್ಕಳು ವಿಜ್ಞಾನಿಗಳಾಗ ಬಹುದು, ವೈದ್ಯರಾಗಬಹುದು, ಇಂಜಿನಿಯರ್ ಆಗಬಹುದು, ಸಾಹಿತಿಗಳಾಗಬಹುದು, ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥ ಚೇತನಭರಿತ ಶಕ್ತಿ ಇರಬಹುದು. ಇಂಥ ವ್ಯಕ್ತಿಗಳನ್ನು ಬೆಳೆಸುತ್ತಿರುವ ಆ ಭೂಮಿ, ಆ ನೆಲ ಎಷ್ಟು ಪವಿತ್ರ ಎಂಬ ವಿಚಾರ ಹೊಳೆದಾಗ ಮೈ ಜುಂ ಎನ್ನುವುದು. ದೊಡ್ಡ ಸರೋವರದಲ್ಲಿಯ ತೆರೆಗಳಂತೆ ಮಕ್ಕಳು ಓಡಾಡುತ್ತವೆ. ಮಾತಾಡುತ್ತವೆ. ಅವರು ಪ್ರಸಾದ ಸ್ವೀಕರಿಸುವುದು, ಪ್ರಾರ್ಥನೆ ಮಾಡುವುದು, ವಚನ ಹೇಳುವುದು, ಭಾವುಕರಿಗೆ ಹುಚ್ಚು ಹಿಡಿಸುತ್ತವೆ. ಇಂಥ ಮಕ್ಕಳ ನಡುವೆ ಚಲಿಸುತ್ತಿರುವ ಶ್ರೀಗಳನ್ನು ಕಂಡಾಗ ನನಗೊಂದು ವಿಚಾರ ಬಂದಿತು. ಅದೆಂದರೆ, ಶ್ರೀಗಳು ಈ ಹಸುಳೆಗಳಿಗೆ, ವೀರಶೈವ ಸಂಸ್ಕೃತಿ, ವಿದ್ಯೆ, ಪ್ರಸಾದ ಕೊಡುವುದು ಸರಿ. ಹಾಗಾದರೆ ಶ್ರೀಗಳಿಗೆ ಮರಳಿ ಬರುವುದೇನು ? ಸರಿಯೋ ತಪ್ಪೊ ನನಗೆ ಹೇಳಲು ಬಾರದು. ಆದರೆ ಅನಿಸಿದ್ದು ಏನೆಂದರೆ ಶ್ರೀಗಳು ಮಕ್ಕಳಿಂದ ಮುಗ್ಧತೆಯನ್ನು, ನಿರ್ಮಲ ಮನಸ್ಸನ್ನು ಅವರ ಬಾಲ್ಯದ ಅದಮ್ಯ ಉತ್ಸಾಹವನ್ನು ತೆಗೆದುಕೊಳ್ಳುತ್ತಿರಬಹುದು. ಕಾರಣವೇ ಶ್ರೀಗಳ ಮುಖದಲ್ಲಿರುವ ಅದ್ಭುತ ಶ್ರೀಕಳೆ, ಮುಗುಳುನಗು, ವಾತ್ಸಲ್ಯಗಳಿಗೆ ಮಿತಿ ಇಲ್ಲ. ಅವರಿಗೆ ಈ ವಯಸ್ಸಿನಲ್ಲೂ ಇರುವ ಈ ಶಕ್ತಿ ಲವಲವಿಕೆಗಳು ಮಕ್ಕಳೊಡನೆ ಕೂಡಿ ಇರುವುದರಿಂದ ಬಂದಿರಬಹುದು. ಇದು ಗೋಚರಿಸಿದರೂ ಸಹ ನಾವು ಎಷ್ಟು ಜನ ಶ್ರೀಗಳಂತೆ ದುಡಿಯುತ್ತೇವೆ.

## ವಿದ್ಯಾರ್ಥಿ ನಿಲಯ :

ಮೂರನೆಯ ಸಂಗತಿ ಎಂದರೆ ಸಿದ್ಧಗಂಗೆಯಲ್ಲಿ ನಿರ್ಮಿಸಲ್ಪಟ್ಟ ವಿದ್ಯಾರ್ಥಿನಿಲಯ, ಆ ನಿಲಯಕ್ಕೆ ಬಂದ ಭವ್ಯತೆ, ಕೇವಲ ಅದರ ಆಕಾರ, ಕಟ್ಟಲು ಬಳಸಿದಂಥ ಕಲ್ಲು, ಕಂಬಗಳಿಂದ ಮಾತ್ರ ಅಲ್ಲ. ಅದರ ಭವ್ಯತೆಗೆ ಅದನ್ನು ಕಟ್ಟಿದ ಉದ್ದೇಶ ಮುಖ್ಯ. ಅದರ ಉದ್ದೇಶ ಪವಿತ್ರವಾದುದು. ಅಂತಲೇ ಅದಕ್ಕೊಂದು ಪವಿತ್ರತೆಯು ಬಂದಿದೆ. ಅದನ್ನು ನೋಡಲು ಸಿಮೆಂಟ್ ಬಳಸಿ ಕಟ್ಟಿದರು ಎನ್ನಬಹುದಾದರೂ ಆ ಕಟ್ಟಡಕ್ಕೆ ಸಿಮೆಂಟಿಗಿಂತಲೂ ಪುಣ್ಯವನ್ನೇ ಹೆಚ್ಚು ಬಳಸಿದ್ದಾರೆ. ಅದನ್ನು ನೋಡುವಾಗ ನನಗಂತೂ ಅದು ಒಂದು ಗುಡಿಯಂತೆ ತೋರುತ್ತದೆ, ಅನಿಸುತ್ತದೆ, ಅನುಭವವಾಗುತ್ತದೆ. ಮೊದಲ ಸಲ ಅದನ್ನು ಕಂಡೊಡನೆ ನನಗೆ ಅದು ವಿದ್ಯಾರ್ಥಿಗಳಿಗೆ ಕಟ್ಟಿಸಿದ ಗುಡಿಯಂತೆ ಅನಿಸಿತು. ಶ್ರೀಗಳು ವಿದ್ಯಾರ್ಥಿಗಳನ್ನು ದೇವರ ರೂಪದಲ್ಲಿ ಕಂಡಿದ್ದಾರೆ. ಅವರ ಸೇವೆಯನ್ನು ನಿರಂತರವಾಗಿ ಮಾಡುತ್ತಿದ್ದಾರೆ. ಇದೊಂದು ರೀತಿಯಿಂದ ವಿದ್ಯಾರ್ಥಿಗಳ ಪೂಜೆ. ಗುಡಿಯಲ್ಲಿ ದೇವರ ಮೂರ್ತಿಯನ್ನು ಸ್ಥಾಪಿಸುವಂತೆ ವಿದ್ಯಾರ್ಥಿಗಳನ್ನು ಇಲ್ಲಿ ಸ್ಥಾಪಿಸುವರು. ನಿತ್ಯವೂ ಅವರ ಪೂಜೆ ನಡೆಯುತ್ತದೆ. ವಿದ್ಯಾರ್ಥಿಗಳ ಸೇವೆಯನ್ನು ಮಾಡಿದವರನ್ನು ನೆನಪಿಸಬೇಕು. ಮೈಸೂರು ಸೀಮೆಯಲ್ಲಿ ಸಿದ್ಧಗಂಗಾ ಶ್ರೀಗಳು, ಸುತ್ತೂರು ಶ್ರೀಗಳು, ಸಿರಿಗೆರೆ ಶ್ರೀಗಳು, ಆದಿಚುಂಚನಗಿರಿ ಶ್ರೀಗಳು ಪ್ರಮುಖರು. ಉತ್ತರ ಕರ್ನಾಟಕದಲ್ಲಿ ವಿದ್ಯಾರ್ಥಿಗಳ ಪೂಜೆ ಮಾಡಿದವರಲ್ಲಿ ಹರ್ಡೇಕರ ಮಂಜಪ್ಪನವರು, ಧಾರವಾಡದ ಮೃತ್ಯುಂಜಯಪ್ಪಗಳು, ಬೆಳಗಾವಿಯ ನಾಗನೂರು ಶಿವಬಸವ ಸ್ವಾಮಿಗಳು, ಇಳಕಲ್ಲಿನ ಮಠ ಮಾಸ್ತರರು ಪ್ರಮುಖರು. ವೀರಶೈವ ಮಠಗಳು ಮಾಡಿದ ಉತ್ತಮ ಕಾರ್ಯಗಳಿಗೆ ಇವು ಉದಾಹರಣೆಗಳು. ಸ್ವಾಮಿಗಳು ಮಾಡಿದ ಮಹಾ ಇಷ್ಟಲಿಂಗ ಪೂಜೆ ಇದೇ ಎಂದು ಜೋರಾಗಿ ಹೇಳಬಹುದು.

## ಪ್ರಸಾದ ನಿಲಯ :

ಇನ್ನೊಂದು ಸಂಗತಿಯನ್ನು ಹೇಳದೇ ಹೋದರೆ ನನಗೆ ಸಮಾಧಾನ ಎನಿಸುವುದಿಲ್ಲ. ಅದೆಂದರೆ ಪ್ರಸಾದ ನಿಲಯ. ವಿದ್ಯಾರ್ಥಿಗಳ ಪ್ರಸಾದಕ್ಕೆ ಕಟ್ಟಿಸಿದ ನಿಲಯ. ಭವ್ಯ ಅನ್ನುವ ಪದದ ಅರ್ಥ ತಿಳಿಯಬೇಕಾದರೆ ಈ ಪ್ರಸಾದ ನಿಲಯವನ್ನು ನೋಡಬೇಕು. ಒಂದೇ ಸಲಕ್ಕೆ ಸುಮಾರು ೩,೫೦೦ ಜನ ವಿದ್ಯಾರ್ಥಿಗಳು ಕುಳಿತು ಪ್ರಸಾದ ಸ್ವೀಕರಿಸುವ ವ್ಯವಸ್ಥೆ ಇದಾಗಿದೆ. ಇದರ ಆಕಾರ, ವಿನ್ಯಾಸ, ವಿಸ್ತಾರಗಳನ್ನು ನೋಡಿದರೆ ಯಾರಿಗಾದರೂ ಅಚ್ಚರಿ ಎನಿಸುತ್ತದೆ. ಕೂಡಲು, ನೀಡಲು, ಕೈತೊಳೆಯಲು, ನೀರು ಕುಡಿಯಲು ಮಾಡಿದ ವ್ಯವಸ್ಥೆಯನ್ನು ನೋಡಿಯೆ ಆನಂದಿಸಬೇಕು. ಇಷ್ಟು ಜನ ಊಟ ಮಾಡುವ ವ್ಯವಸ್ಥೆ ಇದಾದರೆ ಇನ್ನು ಇವರಿಗೆಲ್ಲ ಅಟ್ಟುವ ವ್ಯವಸ್ಥೆ, ಅಂದರೆ ಅಡುಗೆ ಮನೆ ಹಾಗೂ ಸಂಗ್ರಹ ಕೊಠಡಿಗಳು ಹೇಗಿರಬೇಕು ಎಂಬುದು ಕಲ್ಪನೆಗೆ ಬಿಟ್ಟ ವಿಷಯ. ಅಲ್ಲಿ ತಯಾರಾಗುವ ರಾಗಿ ಮುದ್ದೆ, ಕಡುಬು, ಇತರ ಪದಾರ್ಥಗಳನ್ನು ನೋಡಿದರೆ ಅದನ್ನು ತಯಾರಿಸುವವರು ಎಂಥ ಪುಣ್ಯವಂತರು ಎನಿಸುತ್ತದೆ. ಅವರು ತಯಾರಿಸಿದ ಎಡೆ ವಿದ್ಯಾರ್ಥಿ ದೇವರುಗಳು ಸೇವಿಸುವರು ಎನ್ನುವುದೇ ಒಂದು ಖುಷಿ.

ಇಡೀ ಜಗತ್ತಿನಲ್ಲಿ ಬೇರೆ ಇಂಥ ವ್ಯವಸ್ಥೆ ಇದೆಯೋ ಎಂಬುದನ್ನು ಹುಡುಕಬೇಕು.



(ಕೃಪೆ : ತೊಂಬತ್ತರ ತಪಸ್ವಿ)



# ಮಹಾಮಾನವತಾವಾದಿ – ಕಾರುಣ್ಯಮೂರ್ತಿ

ಗೋವಿಂದರಾಜು
ಕುರುವೇಲುತಿಮ್ಮನಹಳ್ಳಿ, ನೆಲಮಂಗಲ ತಾ॥
ಬೆಂಗಳೂರು (ಗ್ರಾ) ಜಿಲ್ಲೆ



**ಕು**ರುವೇಲುತಿಮ್ಮನಹಳ್ಳಿ ೨-೩ ತಲೆಮಾರಿನ ಹಿಂದೆ ಕಟ್ಟಿದ್ದ ೧೦-೧೨ ಮಾಳಿಗೆ ಮನೆಗಳ ಪುಟ್ಟಗ್ರಾಮ. ಪ್ರಾಥಮಿಕ ಶಾಲೆ ನಮ್ಮೂರಿನಲ್ಲಿದೆ. ನಮ್ಮ ಊರಿನಿಂದ ಡಾಬಸ್‌ಪೇಟೆಗೆ ಹೋದೆನೆಂದರೆ ಬೆಂಗಳೂರಿನವ ಅಮೆರಿಕಾಕ್ಕೆ ಹೋದ ಅನುಭವವಾದಂತೆ. ತುಂಬಾ ಬಡ ಕುಟುಂಬ ಮತ್ತು ಗೌರವಸ್ಥ ದೊಡ್ಡ ಕುಟುಂಬದಿಂದ ಬಂದ ನನಗೆ ಮಾಧ್ಯಮಿಕ ಶಿಕ್ಷಣ ಕನಸಿನ ಮಾತಾಗಿತ್ತು. ನಮ್ಮೂರಿನಲ್ಲಿ ನನ್ನ ತಂದೆ ತಾಯಿಯೊಂದಿಗೆ ಕೂಲಿ ಮಾಡಿ ಎರಡು ಹೊತ್ತಿನ ಗಂಜಿಗೆ ಶ್ರಮಪಡೋಣವೆನ್ನುವುದೇ ನನ್ನ ಬಾಲ್ಯದ ಬಯಕೆ. ಆದರೆ ಅಂದು ಮಾಸಿದ ಹರಿದ ಅಂಗಿಯನ್ನು ತೊಟ್ಟು, ವಾರಕ್ಕೊಮ್ಮೆ ಅದೂ ಶನಿವಾರ ದೇವರ ಪೂಜೆಗೆ ಸಾಲ ತಂದ ಅರೆಪಾವು ಅಥವಾ ಪಾವು ಅಕ್ಕಿಯಿಂದ ಮಾಡಿದ ಅನ್ನವನ್ನು ತಿಂದು, ಕೂಲಿಯಾಗಿ ಕೆಲಸ ಮಾಡಬೇಕಾಗಿದ್ದ ನನಗೆ ಇಂದು ಮಾಧ್ಯಮಿಕ ಶಿಕ್ಷಣದಿಂದ ಪ್ರಾರಂಭಿಸಿ ಸ್ನಾತಕೋತ್ತರ ಪದವಿಯವರೆಗೆ ವ್ಯಾಸಂಗ ಮಾಡಿಸಿ, ಅನ್ನ-ವಸತಿ ನೀಡಿ, ಆಶೀರ್ವದಿಸಿ ಮೈತುಂಬ ಶುಭ್ರ, ಬಟ್ಟೆ ಹಾಕಲು, ಜವಾಬ್ದಾರಿ ಸ್ಥಾನಕ್ಕೆ ಏರಲು, ಕತ್ತಲೆಯಲ್ಲಿದ್ದ ನನ್ನ ಜೀವನವನ್ನು, ಹೊರ ಜಗತ್ತಿಗೆ ಬಾರದೇ ನಶಿಸುತ್ತಿದ್ದ ನನ್ನ ಆಲೋಚನೆಗಳನ್ನು, ಇಂದು ಸಮಾಜದ ನಾಲ್ಕಾರು ಗಣ್ಯವ್ಯಕ್ತಿಗಳು ನನ್ನನ್ನು ಗುರುತಿಸುವಂತೆ ಮಾಡಿದ, ನನ್ನ ಬಾಳಿನ ದಿವ್ಯಸ್ಫೂರ್ತಿ, ಜ್ಯೋತಿ, ನನ್ನ ಬಾಳಿನ ಸೂರ್ಯ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ಪೂಜ್ಯರನ್ನು ಸ್ಮರಿಸಿದರೆ, ನೋಡಿದರೆ, ಮಾತ ನಾಡಿದರೆ ನನಗರಿವಾಗದಂತೆ ಮನಸ್ಸು ಪುಳಕಿತಗೊಳ್ಳುತ್ತದೆ ಮತ್ತು ಮೌನವಾಗುತ್ತವೆ. ಮನಸ್ಸಿನ ತುಂಬಾ ನನ್ನ ಬಡತನದ ಹಳೆಯ ನೆನಪುಗಳು ಕಾಡುತ್ತವೆ. ಕಣ್ಣು ಮಂಜಾಗುತ್ತವೆ. ನನ್ನ ಈ ಶಿಕ್ಷಣ, ನನ್ನ ಈ ಸ್ಥಾನ, ಸ್ಥಾನದಿಂದ ದೊರೆಯುವ ಈ ಗೌರವ, ಜವಾಬ್ದಾರಿ, ಸವಲತ್ತು ಎಲ್ಲಾ ನನಗೆ ದೊರೆತದ್ದು ಶ್ರೀಗಳಿಂದಲ್ಲವೆ ? ಎಂಬ ಸತ್ಯ ದೇಹ-ಮನಗಳನ್ನಾವರಿಸಿ ಒಬ್ಬನೇ ಒಂಟಿ ಕುಳಿತು ಅತ್ತು ಬಿಡೋಣವೆನಿಸುತ್ತದೆ. ಏಕೆ ಹೀಗೆ ಎಂದು ಹಲವಾರು ಬಾರಿ ನನ್ನನ್ನು





ನಾನು ಪ್ರಶ್ನಿಸಿಕೊಂಡರೂ ಉತ್ತರ ದೊರೆಯದಾಗಿದೆ. ತಾಯಿ ಕೋಳಿ ತನ್ನ ಮೊಟ್ಟೆಗಳ ಮೇಲೆ ಕುಳಿತು ಶಾಖ ನೀಡಿ ಮರಿಗಳನ್ನು ಮಾಡಿ, ನಂತರ ಆ ಮರಿಗಳಿಗೆ ತಾನು ಓಡಾಡಿ ಅನ್ನ/ಮೇವು ತಂದು ತಾನು ತಿನ್ನದೆ ತನ್ನ ಮರಿಗಳಿಗೆ ಹಂಚಿ, ನಡೆಸಿ, ಓಡಾಡಿಸಿ ಆ ಮರಿ ನಂತರ ತನ್ನ ಅನ್ನವನ್ನು ತಾನು ಗಳಿಸುವಂತೆ ಮಾಡುತ್ತದೆ.

ಪರಮಪೂಜ್ಯರು ಯಾವುದೇ ಸ್ವಾರ್ಥ ಭಾವನೆಗಳಿಲ್ಲದೇ, ಬಾಲ್ಯದಲ್ಲಿಯೇ ಕಮರಿ ಹೋಗುತ್ತಿದ್ದ ಗ್ರಾಮಾಂತರ ಪ್ರದೇಶದ ಕಡುಬಡತನದ ಮಕ್ಕಳನ್ನು ಮಠಕ್ಕೆ ಕರೆತಂದು, ಆಶ್ರಯ ನೀಡಿ ಅನ್ನ ಹಾಕಿ ಮನೆಗಳಲ್ಲಿ ಇಲ್ಲದ ಸುಖವನ್ನು ಮಠದಲ್ಲಿ ನೀಡಿದ್ದಾರೆ, ನನ್ನಂತಹ ಅನೇಕ ಅನೇಕ ಲಕ್ಷ ಲಕ್ಷ ಜನರ ಜೀವನ, ಬಾಲ್ಯದಲ್ಲಿ ಮುದುಡಿ, ಕಮರಿ ಹೋಗದಂತೆ ಕಾಯ್ದು ತಾನು ಉಪವಾಸವಿದ್ದು, ನಿದ್ದೆ ಬಿಟ್ಟು ಸ್ವಂತ ಸುಖವನ್ನು ತ್ಯಜಿಸಿ ನಮಗೆ ಅನ್ನ ನೀಡಿದ್ದಾರೆ, ವಿದ್ಯಾವಂತರನ್ನಾಗಿ ಮಾಡಿದ್ದಾರೆ. ನಾವು ಮತ್ತು ನಮ್ಮನ್ನು ಅವಲಂಬಿಸಿರುವ ಕುಟುಂಬದವರು ತಿನ್ನುವ ಪ್ರತಿ ಅನ್ನದ ಅಗುಳಿನಲ್ಲಿ ಶ್ರೀಗಳ ಪರಿಶ್ರಮವಿದೆ. ಸೇವಿಸುವ ವಾಯುವಿನಲ್ಲಿ ಶ್ರೀಗಳ ತ್ಯಾಗದ ಪರಿಮಳವಿದೆ. ಜೀವನದ ಪ್ರತಿ ಕ್ಷಣ ಕ್ಷಣದಲ್ಲಿ ನಾವು ಮಾಡುವ ಪ್ರತಿ ಕೆಲಸದ ಅಣುವಿನಲ್ಲಿ ಶ್ರೀಗಳವರ ಸ್ಮರಣೆ ಇದೆ. ಇಂದು ಈ ಸ್ಥಿತಿಗೆ ಬರಲು ಯಾರು ಕಾರಣರೆಂದರೆ ಕೊಂಚ ಕಾಲ ಒಬ್ಬಂಟಿಯಾಗಿ ಕುಳಿತು ಯೋಚಿಸಿದರೆ ಶ್ರೀಗಳವರ ಸಂಪೂರ್ಣ ವ್ಯಕ್ತಿತ್ವದ ದಿವ್ಯದರ್ಶನವಾಗುತ್ತದೆ. ಅವರು ನನಗೆ ಸ್ವತಃ ಊಟ ಬಡಿಸಿದ ನೆನಪು, ಜ್ವರವಿದ್ದಾಗ ಗಂಜಿ ಬಡಿಸಿದ್ದು, ೧೦ನೇ ತರಗತಿಯಲ್ಲಿ ಇಂಗ್ಲೀಷ್ ಕಷ್ಟವಾಗಿದ್ದಾಗ ತಾವೇ ಸ್ವತಃ ಪ್ರಾತಃಕಾಲ ೫ ಘಂಟೆಗೆ ಪಾಠ ಮಾಡಿದ್ದು, ಹಬ್ಬ ಹರಿದಿನಗಳಲ್ಲಿ ತಾವೇ ಸ್ವತಃ ನಿಂತು ಸಿಹಿ ಮಾಡಿಸಿದ್ದು, ನಮ್ಮ ರೂಂಗಳಿಗೆ ಬಂದು ಏನು ಓದುತ್ತಿದ್ದೀರಿ ಎಂದು ಕೇಳಿ ಪಠ್ಯಪುಸ್ತಕ ಹಿಡಿದು ಪ್ರಶ್ನೆ ಕೇಳಿದ್ದು, ಪ್ರತಿದಿನ ಪ್ರಾರ್ಥನೆಯಾದ ಕೂಡಲೇ ದೇಶದ ಇತರೆಡೆ ನಡೆಯುವ ವಿದ್ಯಾಮಾನಗಳನ್ನು ತಿಳಿಸಿ ಸಾಮಾನ್ಯ ಜ್ಞಾನ ಹೆಚ್ಚಿಸಿದ್ದು, ತಂದೆ ತಾಯಿ ಗುರುವಾಗಿ ಉಪದೇಶ ಮಾಡಿದ್ದು, ನಾನು ಕದ್ದು ಸಿನಿಮಾ ನೋಡಲು ಹೊರಟಾಗ ತಡೆದದ್ದು, ಕಷ್ಟಕಾಲದ ಆ ದಿನಗಳಲ್ಲಿ ಬೇಸಿಗೆ ರಜೆಯಲ್ಲೂ ಮಠದಲ್ಲಿರಲು ಅವಕಾಶ ನೀಡಿ ಊಟ ನೀಡಿದ್ದು, ಕೆಲವೊಮ್ಮೆ ತಾವೇ ಸ್ವತಃ ಪ್ರಾತಃಕಾಲ ೫ ಘಂಟೆಗೆ ರೂಂಗೆ ಬಂದು ಮಲಗಿರುವ ನಮ್ಮನ್ನು ಎಬ್ಬಿಸಿ ಓದುವಂತೆ ಮಾಡಿದ್ದು ಹೀಗೆ ಒಂದೇ ಎರಡೇ ಎಷ್ಟು ನೆನಪುಗಳ ಸರಮಾಲೆ ನನ್ನ ಮನದಾಳದಲ್ಲಿ ಬಿಚ್ಚಿಕೊಳ್ಳುತ್ತವೆ, ಅವುಗಳನ್ನು ಪದಗಳಲ್ಲಿ ಹಿಡಿದಿಡಲು ಸಾಧ್ಯವಾಗದು. ಪರಮ ಪೂಜ್ಯ ಶ್ರೀ ಶ್ರೀಗಳವರ ತಂದೆ, ತಾಯಿ, ಗುರುಗಳ ತ್ರಿವೇಣಿ ಸಂಗಮ.

ಶ್ರೀಕ್ಷೇತ್ರಕ್ಕೆ ಬಹುದೊಡ್ಡ ಕೊಡಿಗೆ ಕೊಟ್ಟವರು ಪರಮಪೂಜ್ಯ ಉದ್ದಾನಶಿವಯೋಗಿಗಳು. ನಮ್ಮೂರಿಗೆ ಹೋಗುವ ದಾರಿಯಲ್ಲಿ ಸಿಗುವ ಲಕ್ಕೂರು ಅವರದೆಂದು ಕೇಳಿದ್ದೇನೆ. ಬಹುಶಃ ಆ ದಿನಗಳಲ್ಲಿ ಸ್ವಾಮಿಗಳು ೫೦-೬೦ ಜನಕ್ಕೆ ಊಟ ಹಾಕಬೇಕಾದರೆ ತುಂಬಾ ಪ್ರಯಾಸವಾಗುತ್ತಿತ್ತೆಂದು ಕೇಳಿದ್ದೇನೆ. ಸ್ವತಃ ತಪಸ್ವಿಗಳಾದ ಶ್ರೀ ಉದ್ದಾನ ಸ್ವಾಮಿಗಳು ತಮ್ಮ ತಪಃಶಕ್ತಿಯಿಂದ ಶ್ರೀ ಮಠಕ್ಕೆ ನೀಡಿದ ಅಮೋಘ, ಅನನ್ಯವಾದ ಸಂಪತ್ತೆಂದರೆ ನನ್ನ ಗುರುಗಳಾದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳನ್ನು ಗುರುತಿಸಿ ಶ್ರೀಕ್ಷೇತ್ರದ ಜವಾಬ್ದಾರಿಯನ್ನು ವಹಿಸಿದ್ದು. ಇದು ಶ್ರೀಕ್ಷೇತ್ರ ಸುವರ್ಣ ಯುಗವಾಗಲು ಕಾರಣವಾದ ಮೊದಲ ಹೆಜ್ಜೆ. ನೋಂದಣೆ ಮಾಡಿಸಲು ಕಾಸಿಲ್ಲದ, ಸರಳ ಪೂಜಾವಿಧಿಗಳಿಗೂ ಅಗತ್ಯವಾದ ಸಾಮಾಗ್ರಿಗಳ ಕೊರತೆ ಇದ್ದ ಅಂದಿನ ದಿನಗಳಲ್ಲಿ ನಮ್ಮ ಸ್ವಾಮೀಜಿ ಪಟ್ಟಪಾಡು ಹೇಳತೀರದು. ಕಾಲ್ನಡಿಗೆಯಲ್ಲಿ ದೂರದೂರದ ಹಳ್ಳಿಗಳಿಗೆ ಭಿಕ್ಷೆಗೆ ಹೋಗಿದ್ದಾರೆ. ಗ್ರಾಮಗಳಲ್ಲಿ ಹಸಿವು ಬಾಯಾರಿಕೆ-ಆಯಾಸವೆನ್ನದೆ ನನ್ನಂತಹ ಅನೇಕ ಮಕ್ಕಳನ್ನು ಸಾಕಲು ಭಿಕ್ಷೆ ಎತ್ತಿದ್ದಾರೆ. ಸ್ವತಃ ಶ್ರೀಮಠದಲ್ಲಿ ಕೂಲಿಕಾರನಂತೆ ಹೊಲವನ್ನು ಉತ್ತಿದ್ದಾರೆ, ಪೈರು ನೆಟ್ಟಿದ್ದಾರೆ, ಕಳೆ ಕಿತ್ತಿದ್ದಾರೆ. ಕಣ ಮಾಡಿದ್ದಾರೆ. ರಾಗಿ-ಅಕ್ಕಿಗಳಲ್ಲಿ ಕಲ್ಲು ಆಯ್ದಿದ್ದಾರೆ. ನಿಂತು ಬೇಯಿಸಿದ್ದಾರೆ. ಬೇಯಿಸಿದ ಪ್ರಸಾದವನ್ನ ತಾನು ಉಪವಾಸವಿದ್ದು ನಮಗೆ ಊಣ ಬಡಿಸಿ ನಮ್ಮ ಮುಖದಲ್ಲಿನ ನಗುವಿನಿಂದಲೇ ತಾನು ಹೊಟ್ಟೆ ತುಂಬಿಸಿಕೊಂಡು ಸಂತೃಪ್ತರಾಗಿದ್ದಾರೆ. ಶ್ರೀಮಠದಲ್ಲಿರುವ ಪ್ರತಿ ಕಟ್ಟಡಕ್ಕೂ ಸ್ವತಃ ತಾವೇ ಇಟ್ಟಿಗೆ/ಕಲ್ಲು ಹೊತ್ತಿದ್ದಾರೆ. ನಾವು ಶ್ರಮದಾನ ಮಾಡುವಾಗ ನಮ್ಮೊಂದಿಗೆ ಮಕ್ಕಳಾಗಿದ್ದಾರೆ. ನಾವು ಹೊಲದಲ್ಲಿ ಪೈರು, ಕಳೆ ಕೀಳುವಾಗ ತಾಯಿ ಮನೆಯಲ್ಲಿ ಅಡುಗೆ ಮಾಡಿಕೊಂಡು ತನ್ನ ಮಕ್ಕಳಿಗೆ ಊಟ ಹೊತ್ತು ತಂದು ಬಡಿಸುವಂತೆ ನಮಗೆ ಊಟ ಬಡಿಸಿದ್ದಾರೆ. ಜಾತ್ರಾ ಸಂದರ್ಭದ ಒಂದು ತಿಂಗಳು ಮುಂಚೆ



ಕಛೇರಿಯಲ್ಲಿ ಪತ್ರಗಳ ಪರಿಶೀಲನೆಯಲ್ಲಿ ಶ್ರೀ ಶ್ರೀಗಳು

ಸೌದೆಗಾಗಿ ದೇವರಾಯನದುರ್ಗ ಮತ್ತಿತರ ಕಡೆ ತಾವೇ ಸ್ವತಃ ಬಂದು ಸೌದೆ ಕಡಿದಿದ್ದಾರೆ. ಸ್ವತಃ ಹೊತ್ತು ತಂದು, ಗಾಡಿಗೆ ಸಾಗಿಸಿದ್ದಾರೆ. ಜಾತ್ರಾ ವೇಳೆಯಲ್ಲಿಯಂತೂ ಪ್ರತಿ ಕೊಪ್ಪಲಿಗೂ ೧/೨ ಘಂಟೆಗೊಮ್ಮೆ ಬಂದು ಊಟದ ವ್ಯವಸ್ಥೆಗೆ ಸ್ವತಃ ಮೇಲ್ವಿಚಾರಣೆ ಮಾಡುತ್ತಾರೆ. ಶ್ರೀಮಠಕ್ಕೆ ಬರುವ ಭಕ್ತರಿಗೆ, ರೈತರಿಗೆ ಯಾವುದೇ ತೊಂದರೆ ಯಾಗದಂತೆ ಪ್ರಸಾದವಾಗ ಬೇಕು ಅನ್ನುವುದೇ ಶ್ರೀಗಳವರ ಬಯಕೆ.

ನಾವು ವ್ಯಾಸಂಗ ಮಾಡುವಾಗ ಮಕ್ಕಳು-ಮಕ್ಕಳು ಜಗಳವಾಡಿ, ಕೇಸು ಶ್ರೀಗಳವರೆಗೆ ಹೋದಾಗ ಸಿಟ್ಟಿನಿಂದ ಗದರಿಸಿ ನಾವು ಶ್ರೀಗಳ ಕೊಠಡಿಯಿಂದ ಹೊರಬಂದಾಗ ಮಕ್ಕಳಾಟವೆಂದು ನಕ್ಕು ಅದರಲ್ಲೂ ಸಂತೋಷ ಕಂಡಿದ್ದಾರೆ. ಶ್ರೀಮಠದಲ್ಲಿ ಮಕ್ಕಳು ಓಡಾಡುತ್ತಿದ್ದರೆ, ಓದುತ್ತಿದ್ದರೆ, ಊಟ ಮಾಡುತ್ತಿದ್ದರೆ ಶ್ರೀಗಳಿಗೆ ಆಗುವ ಸಂತೋಷ ಅಪಾರ. ಶ್ರೀಮಠದ ವಿದ್ಯಾರ್ಥಿಗಳು ಅತಿ ಹೆಚ್ಚಿನ ಅಂಕ ಗಳಿಸಿದ್ದಾರೆಂದರೆ, ಉನ್ನತ ಪದವಿಗೆ ಹೋಗಿದ್ದಾರೆಂದರೆ ಸತ್ಯ, ಪ್ರಾಮಾಣಿಕ, ನಿಸ್ಪೃಹ ಜೀವನ ನಡೆಸುತ್ತಿದ್ದಾರೆಂದರೆ ಅವರಿಗೆ ಬಹಳ ಖುಷಿ. ಯಾರಾದರೂ ಶ್ರೀಗಳಲ್ಲಿ ಬಂದು ನಿಮ್ಮ ಮಠದ ವಿದ್ಯಾರ್ಥಿ ಇಂತಹ ಕೆಲಸದಲ್ಲಿದ್ದಾರೆ, ಬಡವರ ಬಗ್ಗೆ ಅನುಕಂಪ ತೋರಿ ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿದ್ದಾರೆಂದು ತಿಳಿಸಿದಾಗ ನೆಮ್ಮದಿಯ ನಿಟ್ಟುಸಿರು ಬಿಡುತ್ತಾರೆ.

ಶ್ರೀ ಶ್ರೀಗಳವರ ತಪಸ್ಸಿನ ಶಕ್ತಿ, ತ್ಯಾಗದಿಂದ ಇಂದು ಶ್ರೀಮಠ ಬೃಹದಾಕಾರವಾಗಿ ಬೆಳೆದಿದೆ. ಶ್ರೀಮಠಕ್ಕೆ ಯಾವುದೇ ಸಂಪನ್ಮೂಲಗಳಿಲ್ಲ. ಶ್ರೀಗಳೇ ಈ ಮಠಕ್ಕೆ ಆಸ್ತಿ.

ಶ್ರೀಗಳ ಬ್ರಹ್ಮಚರ್ಯ ವ್ರತ, ಪೂಜೆ, ದಾಸೋಹ, ಪುಸ್ತಕ ಓದುವುದು, ಬಡಮಕ್ಕಳ ಬಗ್ಗೆ ಇರುವ ಕಾಳಜಿ, ಆಧುನಿಕ ಸೌಲಭ್ಯಗಳಲ್ಲಿ ಹಳೆಯದನ್ನೇ ಬಯಸುವ ಮನಸ್ಸು, ಶ್ರೀಮಠಕ್ಕೆ ರಾಜಕೀಯ ಮುಖಂಡರೂ ಬಂದರೂ ರಾಜಕೀಯದಿಂದ ಬಲು ದೂರ. ಹೆಚ್.ಎಂ.ಟಿ. ಗಡಿಯಾರವೂ ನಾಚುವಂತೆ ಪಾಲಿಸಿ ಕೊಂಡು ಬಂದಿರುವ ಸಮಯಪ್ರಜ್ಞೆ, ಎಲ್ಲಿ ಹೋದರೂ ಎದ್ದು ನಿಂತು ಆಶೀರ್ವಚನ ಭಾಷಣ ಮಾಡುವ ಪರಿ, ೯೫ ತುಂಬಿದ್ದರೂ ೨೦ ರ ಹರೆಯದವರೂ ನಡೆಯಲಾಗದಷ್ಟು ಬಿರುಸಾಗಿ ನಡೆಯುವ ಚೈತನ್ಯದ ಚಿಲುಮೆ, ಜಾತಿ-ಮತ-ಭೇದ- ಪ್ರಾಂತ್ಯ-ಭಾಷೆಗಳ ಬಗ್ಗೆ ಜಾತ್ಯಾತೀತ ಭಾವನೆ ಶ್ರೀಗಳವರಲ್ಲಿ ಮನೆ ಮಾಡಿಕೊಂಡಿದೆ.





ಶ್ರೀಗಳ 'ಬ್ರಹ್ಮಚರ್ಯೆ' ಬಗ್ಗೆ ಪಾಲಿಸಿಕೊಂಡು ಬಂದಿರುವ ಈ ಕಠಿಣ ವ್ರತ ಎಲ್ಲರಿಗೂ ಆದರ್ಶವಾಗಿದೆ. ಅವರ ಮುಖದಕಾಂತಿ, ಕಣ್ಣಿನ ಹೊಳಪು, ಬಿರುಸು ನಡೆ, ಎಲ್ಲ ಸಂದರ್ಭದಲ್ಲಿಯೂ ಶಾಂತ ಚಿತ್ತರಾಗಿರುವುದಕ್ಕೆ ಅವರು ಪಾಲಿಸಿಕೊಂಡು ಬಂದಿರುವ ಬ್ರಹ್ಮಚರ್ಯ ಕಾರಣವಾಗಿದೆ.

ಶ್ರೀಮಠ ಇಷ್ಟು ದೊಡ್ಡದಾಗಿ ಬೆಳೆಯಲು, ೮೫೦೦ ಮಕ್ಕಳಿಗೆ ಅನ್ನ, ವಿದ್ಯೆ, ವಸತಿ ಸೌಲಭ್ಯಗಳನ್ನು ಒದಗಿಸಿಕೊಟ್ಟಿರುವ ಪರಮಪೂಜ್ಯರ ಸೇವೆಗೆ ಬಡವ-ಬಲ್ಲಿದರೆನ್ನದೆ ಎಲ್ಲರೂ ಭಕ್ತಿಯಿಂದ ತಮಗಾದಷ್ಟನ್ನು ಅರ್ಪಿಸುತ್ತಾರೆ. ಅವರ ಆದರ್ಶಜೀವನ, ದಾರ್ಶನಿಕ ವ್ಯಕ್ತಿತ್ವ, ನಡೆನುಡಿಯಲ್ಲಿ ಪರಿಶುದ್ಧತೆ, ಬಸವಣ್ಣನವರ ಕಾಯಕ - ದಾಸೋಹ ಸಿದ್ಧಾಂತವನ್ನು ಅನುಷ್ಠಾನಗೊಳಿಸುತ್ತಿರುವ ಪೂಜ್ಯ ಶ್ರೀ ಶ್ರೀಗಳವರು ಎಲ್ಲ ವರ್ಗದ ಜನರ ಪಾಲಿಗೆ ನಡೆದಾಡುವ ದೇವರಾಗಿದ್ದಾರೆ. ಶ್ರೀಮಠಕ್ಕೆ ಕಷ್ಟದಲ್ಲಿದ್ದಾಗ ನಾಲ್ಕಾಣೆಯನ್ನು ಸಹಾಯ ಮಾಡಿದವರನ್ನು ಸ್ಮರಿಸುವ ಶ್ರೀಗಳ ಆದರ್ಶ ಗುಣ ಮೇರು ಸದೃಶ್ಯವಾದುದು. ಅದಕ್ಕೆ ಅವರನ್ನು ದೈವಪುರುಷರೆಂದು ಆರಾಧಿಸುವುದು.

೯೫ರ ವಯಸ್ಸಿನಲ್ಲಿ ಮಂಚದ ಮೇಲೆ ಕುಳಿತು ಕಬ್ಬಿಣದ ಮಳೆಯಿಂದ ತಾಯಿತಗಳನ್ನು ಬರೆಯುವುದು, ಹಾವಿಗೆಗಳನ್ನು ಮೆಟ್ಟಿ ಜೋರಾಗಿ ನಡೆಯುವ ಪರಿಯನ್ನು ಗಮನಿಸಿದಾಗ ಮಾತು ಮೌನವಾಗುತ್ತದೆ. ಜಗಜ್ಯೋತಿ ಬಸವೇಶ್ವರ ನಾಟಕವನ್ನು ಪೂರ್ಣ ಮುಗಿಯುವವರೆಗೂ ತದೇಕ ಚಿತ್ತದಿಂದ ನೋಡಿ ಕಲಾವಿದರಿಗೆ ಸಲಹೆ, ಸೂಚನೆ, ಮಾರ್ಗದರ್ಶನ ನೀಡುವುದನ್ನು ನೋಡಿದಾಗ ಆಶ್ಚರ್ಯವಾಗುತ್ತದೆ. ಇದುವರೆಗೂ ಸುಮಾರು ೬೦೦ಕ್ಕೂ ಹೆಚ್ಚು ಪ್ರದರ್ಶನಗಳನ್ನು ನೋಡಿ ಸಂತೋಷಪಟ್ಟಿದ್ದಾರೆ. ರಾತ್ರಿಯಲ್ಲಾ ನಾಟಕವನ್ನು ನೋಡಿ ಮರುದಿನ ದಿನನಿತ್ಯದ ಕಾಯಕದಲ್ಲಿ ತೊಡಗುವ ತೇಜೋಮೂರ್ತಿಯನ್ನು ಕಂಡಾಗ ಅಚ್ಚರಿ ಉಂಟಾಗುತ್ತದೆ.

ಯಾರಿಗಾಗಿ, ಏತಕ್ಕಾಗಿ ಈ ರೀತಿ ಎಂದರೆ ಮಾನುಕುಲದ ಉದ್ಧಾರಕ್ಕಾಗಿ, ಬಡವರನ್ನು ಸಮಾಜದಲ್ಲಿ ತಲೆ ಎತ್ತಿ ಗೌರವದಿಂದ ಬಾಳ್ವೆ ನಡೆಸುವುದಕ್ಕಾಗಿ, ಹಸಿದ ಹೊಟ್ಟೆಗೆ ಅನ್ನ ಬಡಿಸುವುದಕ್ಕಾಗಿ, ಬರಿದಾದ ಮೆದುಳೊಳಗೆ ಜ್ಞಾನಜ್ಯೋತಿಯ ಬೆಳಗುವುದನ್ನು, ಕಲುಷಿತ ಸಮಾಜಕ್ಕೆ 'ಸ್ವಚ್ಛತೆ'ಯ ಮಂತ್ರೋಪದೇಶಕ್ಕಾಗಿ.

ಶ್ರೀಮಠದಲ್ಲಿ ಶಿಕ್ಷಣದ ಜೊತೆಗೆ ಸಂಸ್ಕಾರ ಮತ್ತು ಸಂಸ್ಕೃತಿ ದೊರೆಯುತ್ತಿರುವುದರಿಂದಲೇ ಇಂದು ಶ್ರೀಮಠದ ವಿದ್ಯಾರ್ಥಿಗಳೆಂದರೆ ಎಲ್ಲೆಲ್ಲೂ ಗೌರವ ಆದರ. ವಿವಿಧ ಜಾತಿ ವರ್ಗದವರಾದ ಬ್ರಾಹ್ಮಣ, ಲಿಂಗಾಯಿತ, ವಕ್ಕಲಿಗ, ಗೊಲ್ಲ, ಕುರುಬ, ಪ.ಜಾತಿ/ವರ್ಗ, ಮುಸ್ಲಿಂ, ಕ್ರೈಸ್ತ ಇತ್ಯಾದಿ ಜನಾಂಗದ ಶ್ರೀಮಠಕ್ಕೆ ಬಂದು ವಿದ್ಯಾರ್ಥಿಗಳು ಶಿಕ್ಷಣ ಪಡೆದು 'ಮನುಷ್ಯರಾಗಿ' ಮಠದಿಂದ ಹೊರ ಹೋಗುತ್ತಾರೆಯಾದ್ದರಿಂದಲೇ ಶ್ರೀಮಠಕ್ಕೆ ಜಾತ್ಯಾತೀತ ಮಠ ಎಂದು ಹೆಸರು ಬಂದಿದೆ.

ಇಂತಹ ಅವಕಾಶ ನೀಡಿದ ಶ್ರೀಗಳು ಉಪಕಾರ ಮಾಡಿದ್ದಕ್ಕೆ ನಮ್ಮಿಂದ ಏನನ್ನು ಬಯಸರು. ಉತ್ತಮವಾಗಿ ನಿಮ್ಮ ನಿಮ್ಮ ಉದ್ಯೋಗದಲ್ಲಿ ಕರ್ತವ್ಯ ನಿಷ್ಠೆಯಿಂದ, ಪ್ರಾಮಾಣಿಕವಾಗಿ ಪರಮಾತ್ಮ ಮೆಚ್ಚುವ ಹಾಗೆ ಕೆಲಸ ಮಾಡಿ, ಸಚ್ಚಾರಿತ್ರ್ಯ ಬೆಳೆಸಿಕೊಂಡು ಕುಟುಂಬದವರನ್ನೂ ಚೆನ್ನಾಗಿ ನೋಡಿಕೊಳ್ಳಿ, ದುಶ್ಚಟದಿಂದ ದೂರವಿರಿ'' ಇಷ್ಟೇ. ಶ್ರೀಗಳು ನಮಗೆ ಹೇಳಿದ್ದು, ನಮ್ಮನ್ನೇ ಅಲ್ಲ ಯಾವ ಶ್ರೀಮಂತರನ್ನೂ, ರಾಜಕಾರಣಿಗಳನ್ನೂ, ಅಧಿಕಾರಿಗಳನ್ನೂ ಏನು ಕೇಳಿಲ್ಲ, ಯಾವತ್ತಿಗೂ ಕೇಳುವುದಿಲ್ಲ. ಬರುವ ಕಷ್ಟಗಳು ನನಗಿರಲಿ, ಶ್ರೀ ಸಿದ್ಧಲಿಂಗೇಶ್ವರರು ನೆರವಿಗಿದ್ದಾರೆ ನೀವು ಸುಖವಾಗಿರಿ ಎಂದೇ ಯಾವಾಗಲೂ ಶ್ರೀಗಳು ಹರಸುವುದು. ಇಂದು ರಾಜಕಾರಣಿಗಳು, ಅಧಿಕಾರಿಗಳು, ಯಾರನ್ನೂ ಆದರ್ಶ ವ್ಯಕ್ತಿಯೆಂದು ಪಾಲಿಸುವುದು ಎಂಬ ಜಿಜ್ಞಾಸೆಯಲ್ಲಿರುವಾಗ ಎಲ್ಲಾ ಸ್ವಾಮಿಗಳ ಪರಂಪರೆಗೆ ನಮ್ಮ ಶ್ರೀಗಳು ಆದರ್ಶವೆನ್ನವುದರಲ್ಲಿ ಉತ್ಪ್ರೇಕ್ಷೆಯಿಲ್ಲ. ಸೂರ್ಯನಿಗೆ ಸೂರ್ಯನೇ ಸಾಟಿಯಾದಂತೆ ಶ್ರೀಗಳಿಗೆ ಶ್ರೀಗಳೇ ಸಾಟಿ.

ಹೃದಯ ಮನದಲ್ಲಿ ಆವರಿಸಿರುವ ಶ್ರೀಗಳು ನನಗೆ ನೀಡಿರುವ ಉಪಕಾರಕ್ಕೆ, ಋಣ ತೀರಿಸಲು ನನ್ನಲ್ಲಿ ಏನೂ ಇಲ್ಲ. ಋಣ ತೀರಿಸುವುದಂತೂ ಕನಸಿನ ಮಾತು. ನನಗೆ ಆಯುಷ್ಯವಿದ್ದರೆ ಅದನ್ನು ಪರಮಪೂಜ್ಯರಿಗೆ ನೀಡು ಎಂಬುದೇ ಆ ಭಗವಂತನಲ್ಲಿ ನನ್ನ ಕಳಕಳಿಯ ಪ್ರಾರ್ಥನೆ. ✡



# ಶ್ರೀ ಶಿವಕುಮಾರ ಸ್ವಾಮೀಜಿ ವಿದ್ಯಾಪೀಠ ಟ್ರಸ್ಟ್ - ಒಂದು ಪರಿಚಯ

ಬಿ.ನಂ. ಚನ್ನಪ್ಪ
ಕಾರ್ಯದರ್ಶಿ, ಶ್ರೀ ಶಿ.ವಿದ್ಯಾಪೀಠ ಟ್ರಸ್ಟ್
ಬೆಂಗಳೂರು

ಸಿದ್ಧಗಂಗಾಕ್ಷೇತ್ರವು ಇಂದು ಒಂದು ಆಧ್ಯಾತ್ಮಿಕ ಕೇಂದ್ರವಷ್ಟೇ ಅಲ್ಲ, ಅದೊಂದು ಸಾಮಾಜಿಕ, ಸಾಂಸ್ಕೃತಿಕ ಹಾಗೂ ವಿದ್ಯಾಕೇಂದ್ರವಾಗಿದೆ. ಶ್ರೀಗಳವರು, ಸಿದ್ಧಗಂಗಾ ಮಠದ ಸಾರಥ್ಯವಹಿಸಿಕೊಂಡು ಸುಮಾರು ಆರು ದಶಕಗಳೇ ಕಳೆದಿವೆ, ಅಂದಿನಿಂದ ಇಂದಿನವರೆಗೆ, ಸಾಮಾಜಿಕ ಹಾಗೂ ವಿದ್ಯಾಕ್ಷೇತ್ರದಲ್ಲಿ ಅಪೂರ್ವವಾದ ಮೌನಕ್ರಾಂತಿಯೇ ನಡೆದಿದೆ.

ಯಾವುದೇ ಒಂದು ರಾಷ್ಟ್ರದ ಸರ್ವತೋಮುಖ ಪ್ರಗತಿಯ ಸಂಕೇತ ಅಲ್ಲಿನ ವಿದ್ಯಾಭ್ಯಾಸ. ಈ ವಿಶ್ವದಲ್ಲಿ ಅತಿ ಹೆಚ್ಚು ಮುಂದುವರಿದ ರಾಷ್ಟ್ರಗಳೆಂಬ ಹೆಗ್ಗಳಿಕೆ ಇರುವ ದೇಶಗಳಲ್ಲಿ ನೂರಕ್ಕೆ ನೂರರಷ್ಟು ಜನ ವಿದ್ಯಾವಂತ ರಾಗಿರುವುದೇ ಇದಕ್ಕೆ ಜೀವಂತ ಸಾಕ್ಷಿ, ಇದನ್ನು ನಮ್ಮ ರಾಷ್ಟ್ರ ಸ್ವಾತಂತ್ರ್ಯ ಗಳಿಸಿದಾಗಲೇ ಅರಿತುಕೊಂಡು ಕಳೆದ ೫೫ ವರ್ಷಗಳಿಂದ ವಿದ್ಯಾಭ್ಯಾಸಕ್ಕೆ ಒತ್ತುಕೊಟ್ಟಿದ್ದರೆ. ಇಂದಿನ ಭಾರತದ ಚಿತ್ರವೇ ಬೇರೆಯಾಗುತ್ತಿತ್ತು. ವಿದ್ಯೆ ಯಾರೂ ಕಸಿದುಕೊಳ್ಳಲಾಗದ ಅಪೂರ್ವ ಆಸ್ತಿ. ಅದು ವ್ಯಕ್ತಿಯ ವಿಕಾಸಕ್ಕೆ ಕಾರಣವಾಗಿ ಆ ಮೂಲಕ ತನ್ನ ಬದುಕನ್ನು ರೂಪಿಸಿಕೊಳ್ಳ ಬಹುದಾಗಿದೆ, ಈ ಕಾರ್ಯ ಮಾಡುವಲ್ಲಿ ಸರ್ಕಾರಗಳು ಭಾಗಶಃ ಯಶಸ್ವಿಯಾದರೂ ಇನ್ನೂ ಸಮಸ್ಯೆ ಅಗಾಧವಾಗಿದೆ.

ಈ ವಿಚಾರವನ್ನು ಮನಗಂಡು ಪೂಜ್ಯ ಸ್ವಾಮೀಜಿ ಯವರು ಆಧ್ಯಾತ್ಮಿಕ, ಸಾಮಾಜಿಕ ಕ್ರಾಂತಿಯ ಜೊತೆಗೆ, ಅಕ್ಷರಕ್ರಾಂತಿಯ ಅವಶ್ಯಕತೆಯನ್ನು ಮಹತ್ವ ವೆಂದು ಪರಿಗಣಿಸಿ ಆರು ದಶಕಗಳಿಂದ ಲಕ್ಷಾಂತರ ಮಂದಿ ಬಡವರೂ, ಅಸಹಾಯಕರೂ ಆದ ವಿದ್ಯಾರ್ಥಿಗಳಿಗೆ ವಿದ್ಯಾ ದಾನ ಮಾಡುತ್ತಾ ಬಂದಿದ್ದಾರೆ. ಅದರಲ್ಲೂ ಹಳ್ಳಿಗಾಡಿನ ಬಡ ವಿದ್ಯಾರ್ಥಿಗಳ ವಿದ್ಯಾರ್ಜನೆಗೆ ಶ್ರೀಮಠವು ವರದಾನವಾಗಿದೆ. ಇಂದು ಸಿದ್ಧಗಂಗಾ ಮಠದಲ್ಲಿ ಸುಮಾರು ೮೦೦೦ ವಿದ್ಯಾರ್ಥಿಗಳು ಯಾವ ಜಾತಿ, ಮತ, ಪಂಥ ಹಾಗೂ ಪ್ರದೇಶಗಳ ಭೇದವಿಲ್ಲದೆ ವಿದ್ಯಾರ್ಜನೆ ಮಾಡುತ್ತಿರುವುದು ಸಮಾಜದ ಎಲ್ಲರ ಮೆಚ್ಚುಗೆ ಹಾಗೂ ಆದಕ್ಕೆ ಪಾತ್ರವಾಗಿದೆ. ಈ ವಿದ್ಯಾರ್ಥಿಗಳ ವಸತಿ ಸೌಕರ್ಯ ಹಾಗೂ ದಾಸೋಹ ವ್ಯವಸ್ಥೆಯೂ ತೃಪ್ತಿಕರವಾಗಿ ನಡೆಯುತ್ತಿದೆ. ಎಲ್ಲಿಯೂ ಕಂಡು ಕೇಳರಿಯದ ಈ ಅದ್ಭುತ ಕಾರ್ಯವು ಸೋಜಿಗದ ಮತ್ತು ಪವಾಡ ಸದೃಶವೆಂದು ಎಲ್ಲರ ಅಭಿಪ್ರಾಯ. ಇದು ಪರಮ ಪೂಜ್ಯ ಸ್ವಾಮೀಜಿಯವರಿಗೆ ಅತ್ಯಂತ ಪ್ರಿಯವಾದ ಹಾಗೂ ಆತ್ಮೀಯವಾದ ಕೈಂಕರ್ಯವಾಗಿದೆ, ಇದು ಒಂದು ವ್ಯಕ್ತಿಯಾಗಲೀ ಅಥವಾ ಸಂಘ ಸಂಸ್ಥೆಗಳಾಗಲೀ



ನಿರ್ಮಾಣವಾಗುತ್ತಿರುವ ಕಟ್ಟಡದ ಒಂದು ನೋಟ







ಮಾರ್ಚ್ ೩೧ರಂದು ಶ್ರೀ ಶಿವಕುಮಾರ ಸ್ವಾಮಿಜೀ ವಿದ್ಯಾಪೀಠದ ಟ್ರಸ್ಟ್ ಆಶ್ರಯದಲ್ಲಿ ನಡೆದ ಸಮಾವೇಶವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಮಾಜಿ ಪ್ರಧಾನಿ ಹಾಗೂ ಸಂಸತ್ ಸದಸ್ಯರಾದ ಶ್ರೀ ಹೆಚ್.ಡಿ. ದೇವೇಗೌಡ ಅವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸುತ್ತಿರುವುದು.

ನಡೆಸುವುದು ಅಸಾಧ್ಯ. ಇದನ್ನು ಒಂದು ಶಕ್ತಿಯಾಗಿ ಪೂಜ್ಯ ಶ್ರೀಗಳವರು ನಡೆಸುತ್ತಿದ್ದಾರೆ.

ಪೂಜ್ಯ ಸ್ವಾಮೀಜಿಯವರು ಈಗಾಗಲೇ ನೂರಿಪ್ಪತ್ತಕ್ಕೂ ಹೆಚ್ಚಿನ ವಿದ್ಯಾ ಸಂಸ್ಥೆಗಳನ್ನು, ಬಹುಮಟ್ಟಿಗೆ ಹಳ್ಳಿಗಾಡಿನ ಪ್ರದೇಶದಲ್ಲಿ ಪ್ರಾರಂಭ ಮಾಡಿ ಸಮಾಜದಲ್ಲಿ ಬಡವರಿಗೆ ದುರ್ಬಲರಿಗೆ ವಿದ್ಯಾಭ್ಯಾಸಕ್ಕೆ ಅವಕಾಶ ಕಲ್ಪಿಸಿದ್ದಾರೆ. ಈ ವಿದ್ಯಾಸಂಸ್ಥೆಗಳಲ್ಲಿ ವಿದ್ಯೆ ಪಡೆದಂಥ ಸಾವಿರಾರು ಮಂದಿ ಇಂದು ದೇಶ ವಿದೇಶಗಳಲ್ಲಿ ವಿವಿಧ ರಂಗಗಳಲ್ಲಿ ಕೆಲಸ ಮಾಡುತ್ತಾ ತಮ್ಮ ಜೀವನವನ್ನು ರೂಪಿಸಿಕೊಂಡಿದ್ದಾರೆ. ಅವರೆಲ್ಲರಿಗೂ, ಶ್ರೀಮಠದ ಹಾಗೂ ಪೂಜ್ಯ ಶ್ರೀಗಳವರ ಬಗ್ಗೆ ಅಪಾರ ಅಭಿಮಾನ ಮತ್ತು ಗೌರವವಿದೆ. ಹಾಗಾಗಿ ಹಳೆ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಸೇರಿ ೧೯೭೯ರಲ್ಲಿ ಒಂದು ಸಂಘವನ್ನು ಸ್ಥಾಪಿಸಿರುತ್ತಾರೆ. ಈ ಸಂಘದ ಒಂದು ಶಾಖೆಯು ಬೆಂಗಳೂರಿನಲ್ಲಿದೆ. ಸುಮಾರು ೧೫೦೦ ಜನ ಇದರಲ್ಲಿ ಸದಸ್ಯರಾಗಿದ್ದಾರೆ. ಈ ಎಲ್ಲ ಸದಸ್ಯರುಗಳ ಆಶಯದಂತೆ, ಬೆಂಗಳೂರಿನಲ್ಲಿ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಒಂದು ಉತ್ತಮ ಗುಣಮಟ್ಟದ ಶಾಲೆಯನ್ನು ಪ್ರಾರಂಭಿಸಲು ತೀರ್ಮಾನಿಸಿದರು. ಶ್ರೀಗಳವರು ವಿದ್ಯಾಕ್ಷೇತ್ರಕ್ಕೆ ಸಲ್ಲಿಸಿರುವ ಅಮೂಲ್ಯ ಸೇವೆಯ ಪ್ರತೀಕವಾಗಿ ಅವರ ನಾಮಾಂಕಿತದಲ್ಲಿ ಒಂದು ವಿದ್ಯಾಸಂಸ್ಥೆಯನ್ನು ಸ್ಥಾಪಿಸಲು ಉದ್ದೇಶಿಸಿ ದಿನಾಂಕ ೨೪-೮-೨೦೦೦ದಂದು ''ಸಿದ್ಧಗಂಗಾ ಶ್ರೀ ಶಿವಕುಮಾರ ಸ್ವಾಮೀಜಿ ವಿದ್ಯಾಪೀಠ ಟ್ರಸ್ಟ್'' ಎಂಬ ಸಂಸ್ಥೆಯನ್ನು ನೋಂದಾವಣೆ ಮಾಡಲಾಯಿತು. ಇದಕ್ಕೆ ಶ್ರೀಗಳವರು ''ಸೋಲ್ ಟ್ರಸ್ಟಿ'' ಯಾಗಿರುತ್ತಾರೆ. ಈ ಟ್ರಸ್ಟಿನ ದಿನ ನಿತ್ಯದ ಆಡಳಿತ ಹಾಗೂ ಕಾರ್ಯಚಟುವಟಿಕೆಗಳನ್ನು ನಡೆಸಲು ಒಂದು ''ಆಡಳಿತ ಮಂಡಳಿ''ಯನ್ನು (ಗೌರ್ನಿಂಗ್ ಕೌನ್ಸಿಲ್), ಹಳೆ ವಿದ್ಯಾರ್ಥಿಯಾದ ಶ್ರೀ ರೇವಣ್ಣಸಿದ್ಧಯ್ಯನವರ (ನಿವೃತ್ತ ಪೋಲಿಸ್ ಮಹಾನಿರ್ದೇಶಕರು) ಅಧ್ಯಕ್ಷತೆಯಲ್ಲಿ ರಚಿಸಲಾಗಿದೆ. ಅದರಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆಸಲ್ಲಿಸಿರುವ ಅನೇಕ ಗಣ್ಯರು ಸದಸ್ಯರಾಗಿರುತ್ತಾರೆ.




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರಸಿದ್ಧ ನೇತ್ರ ತಜ್ಞ ಡಾ. ಎಂ.ಸಿ. ಮೋದಿ, ವಿದ್ಯಾಪೀಠ ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ಎಲ್. ರೇವಣಸಿದ್ಧಯ್ಯ, ಉಪಾಧ್ಯಕ್ಷರಾದ ಶ್ರೀ ಕೆ.ಎನ್. ಗೋವಿಂದರಾಜು, ಕೋಶಾಧ್ಯಕ್ಷರಾದ ಟಿ.ಬಿ. ವಿರೂಪಾಕ್ಷಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು

ಚಂದ್ರಾ ಬಡಾವಣೆಯಲ್ಲಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ೧೯೯೪ರಲ್ಲಿ ಸುಮಾರು ೧೩,೦೦೦ ಚ.ಮೀ. ವಿಸ್ತೀರ್ಣದ ಒಂದು ನಿವೇಶನವನ್ನು (ಸುಮಾರು ಮೂರು ಎಕರೆ) ಸಿದ್ಧಗಂಗಾ ವಿದ್ಯಾಸಂಸ್ಥೆಗೆ ನೀಡಿರುತ್ತಾರೆ. ಪೂಜ್ಯಶ್ರೀಗಳವರು ಈ ನಿವೇಶನದಲ್ಲಿ ಉದ್ದೇಶಿತ ಶಾಲೆಗಾಗಿ ನಾಲ್ಕು ಮಹಡಿಗಳನ್ನು ಒಂದು ಉತ್ತಮವಾದ ಕಟ್ಟಡವನ್ನೂ, ನಿವೇಶನಕ್ಕೆ ಗಡಿಗೋಡೆಯನ್ನು ಕಟ್ಟಿಸಿಕೊಟ್ಟಿದ್ದಾರೆ. ಈ ಕಟ್ಟಡವು ೨೫೦೦೦ ಚ.ಅ.ಗಳಷ್ಟು ವಿಸ್ತೀರ್ಣ ಹೊಂದಿದೆ, ಇದರಲ್ಲಿ ೨೨ ತರಗತಿ ಕೊಠಡಿಗಳಿದ್ದು, ಪ್ರೀ ನರ್ಸರಿ, ಪ್ರಯೋಗಶಾಲೆ, ಗ್ರಂಥಾಲಯ, ಆಡಳಿತ ಕೊಠಡಿಗಳು ಮತ್ತು ಶೌಚಾಲಯಗಳನ್ನು ಒಳಗೊಂಡು ೧೦ನೇ ತರಗತಿವರೆಗೆ ಶಾಲೆಯನ್ನು ನಡೆಸಲು ಸ್ಥಳಾವಕಾಶವಿದೆ. ಈ ನಿವೇಶವನ್ನು ವಿದ್ಯಾಭ್ಯಾಸಕ್ಕಾಗಿ ಒಂದು ಉತ್ತಮ ಪರಿಸರವಾಗಿ ಪರಿವರ್ತಿಸಲು ಹುಲ್ಲುಹಾಸು, ಗಿಡ ಮರಗಳನ್ನು ಬೆಳಸುವುದು ಮತ್ತು ಕ್ರೀಡಾ ಚಟುವಟಿಕೆಗಾಗಿ ಕ್ರೀಡಾಂಗಣ ನಿರ್ಮಾಣದ ಯೋಜನೆ ಹಾಕಿಕೊಳ್ಳ ಲಾಗಿದೆ. ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಒಂದು ಪ್ರಾರ್ಥನಾ ಮಂದಿರವನ್ನು ಕಟ್ಟಲು ಉದ್ದೇಶಿಸಲಾಗಿದೆ.

ಸಿದ್ಧಗಂಗಾ ಶ್ರೀ ಶಿವಕುಮಾರ ಸ್ವಾಮೀಜಿ ವಿದ್ಯಾಪೀಠವು ೨೦೦೨-೨೦೦೩ನೇ ವರ್ಷದಿಂದ ಉದ್ದೇಶಿತ ಪ್ರತಿಷ್ಠಿತ ಶಾಲೆಯನ್ನು ಪ್ರಾರಂಭಿಸಲು ಕಾರ್ಯೋನ್ಮುಖ ವಾಗಿದೆ. ಈ ದಿಸೆಯಲ್ಲಿ ಅಧ್ಯಕ್ಷರು ಹಾಗೂ ಕೆಲವು ಸದಸ್ಯರು ಹಲವು ಹೆಸರಾಂತ ವಿದ್ಯಾಸಂಸ್ಥೆಗಳಿಗೆ ಭೇಟಿ ಕೊಟ್ಟು ಅವುಗಳ ಕಾರ್ಯವೈಖರಿಯ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಅದರ ಪರಿಣಾಮವಾಗಿ, ಉದ್ದೇಶಿತ ಸಿದ್ಧಗಂಗಾ ಶಾಲೆಯು ಉನ್ನತ ಮಟ್ಟದ ಆಧುನಿಕ ವಿದ್ಯಾಭ್ಯಾಸದ ಜೊತೆ ಜೊತೆಗೆ ನಮ್ಮ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ವಿದ್ಯಾ ಸಂಸ್ಥೆಯಾಗಿ ಬೆಳೆಯಬೇಕೆಂಬುದು ಎಲ್ಲರ ಇಚ್ಛೆಯಾಗಿದೆ. ವಿದ್ಯೆಯು ವ್ಯಕ್ತಿಯ ಜ್ಞಾನ ವಿಕಾಸಕ್ಕೆ ಕಾರಣವಾದರೆ, ಉತ್ತಮ ಸಂಸ್ಕೃತಿಯು ಬದುಕನ್ನು ಅರ್ಥಪೂರ್ಣವಾಗಿಸಿ ಸಾರ್ಥಕತೆಯನ್ನು ತಂದುಕೊಡುತ್ತದೆ. ಆದ್ದರಿಂದಲೇ ಭಾರತವು ಲೌಕಿಕವಾಗಿ ಬಡದೇಶವಾದರೂ, ಆಧ್ಯಾತ್ಮಿಕವಾಗಿ, ಸಾಂಸ್ಕೃತಿಕವಾಗಿ ಇಡೀ ವಿಶ್ವಕ್ಕೆ ಮಾರ್ಗದರ್ಶನ ನೀಡಬಲ್ಲ ಸಾಮರ್ಥ್ಯ ಹೊಂದಿದೆ. ಬಹುಪಾಲು ವಿದ್ಯಾಸಂಸ್ಥೆಗಳು ವಾಣಿಜ್ಯಕರಣಗೊಳ್ಳುತ್ತಿರುವ





ಇಂದಿನ ದಿನಗಳಲ್ಲಿ, ಉತ್ತಮ ವಿದ್ಯಾಭ್ಯಾಸವು ಸಮಾಜದ ಎಲ್ಲ ಸ್ತರದ ವಿದ್ಯಾರ್ಥಿಗಳಿಗೂ ಸಿಗುವಂತಹ ಆದರ್ಶ ಸಂಸ್ಥೆಯಾಗಿ ಬೆಳೆಸಬೇಕೆಂಬುದು ನಮ್ಮ ಹಂಬಲವಾಗಿದೆ.

ಈ ಶಾಲೆಯಲ್ಲಿ ಪ್ರೀ ನರ್ಸರಿಯಿಂದ ಹಿಡಿದು ಪದವಿ ಪೂರ್ವ ತರಗತಿವರೆಗೆ (ಪಿ.ಯು.ಸಿವರೆಗೆ) ವಿದ್ಯಾಭ್ಯಾಸಕ್ಕೆ ಅವಕಾಶವಿರುತ್ತದೆ ಮತ್ತು ಇಲ್ಲಿ ಸಿ.ಬಿ.ಎಸ್.ಇ. (ಸೆಂಟ್ರಲ್ ಬೋರ್ಡ್ ಆಫ್ ಸೆಕೆಂಡರಿ ಎಜುಕೇಶನ್ ಪಠ್ಯಕ್ರಮವನ್ನು ಅಳವಡಿಸಲು ಉದ್ದೇಶಿಸಲಾಗಿದೆ. ಅದಕ್ಕಾಗಿ ಸರ್ಕಾರದ ಅನುಮತಿಯನ್ನು ಇಷ್ಟರಲ್ಲೇ ನಿರೀಕ್ಷಿಸಲಾಗಿದೆ. ಈ ವರ್ಷ ದಿಂದ ಪ್ರಿ-ನರ್ಸರಿ, ಎಲ್.ಕೆ.ಜಿ., ಯು.ಕೆ.ಜಿ. ಮೊದಲನೆ ತರಗತಿ ಮತ್ತು ಪ್ರೌಢಶಾಲೆಯ ಎಂಟನೇ ತರಗತಿಗಳಿಗೆ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲಾಗುವುದು. ಇದಕ್ಕಾಗಿ ದಕ್ಷ ಹಾಗೂ ಯೋಗ್ಯ ಬೋಧನಾ ಸಿಬ್ಬಂದಿ ಮತ್ತು ಪ್ರಾಂಶುಪಾಲರನ್ನು ನೇಮಿಸಿಕೊಳ್ಳಲು ಹಾಗೂ ಈ ಶಾಲೆಗೆ ಬೇಕಾಗುವ ಪೀಠೋಪಕರಣಗಳು, ಪುಸ್ತಕ ಭಂಡಾರ, ಪ್ರಯೋಗ ಶಾಲೆ, ಕ್ರೀಡೆ ಹಾಗೂ ದೈಹಿಕ ಶಿಕ್ಷಣಕ್ಕಾಗಿ ಉಪಕರಣ ಗಳಿಗಾಗಿ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ.

ಈಗಿನ ವಿದ್ಯಾಭ್ಯಾಸವು ಸ್ಪರ್ಧಾತ್ಮಕ ಪರ್ವ ಕಾಲದಲ್ಲಿದೆ ಎಂದರೆ ತಪ್ಪಾಗಲಾರದು. ಸಾಕಷ್ಟು ಪ್ರತಿಭಾ ಸ್ಪರ್ಧೆಯಿದ್ದು ವಿದ್ಯಾರ್ಥಿಗಳ ಮೇಲೆ ಅನಪೇಕ್ಷಿತ ಒತ್ತಡವಿದೆ. ಆದ್ದರಿಂದಲೇ ಉತ್ತಮ ಗುಣಮಟ್ಟದ ಜೊತೆಗೆ ಉತ್ತಮ ಪರಿಸರ ಹಾಗೂ ಬೋಧನಾ ವಿಧಾನಗಳು ಮುಖ್ಯವಾಗುತ್ತವೆ. ಇಂದು ಆಧುನಿಕ ಜೀವನದಲ್ಲಿ ಕಂಪ್ಯೂಟರ್ ಅಥವಾ ಗಣಕ ಯಂತ್ರಗಳು ಅನಿವಾರ್ಯ ವಾಗುತ್ತಾ ಬರುತ್ತಿವೆ. ಕಂಪ್ಯೂಟರ್ ಇಲ್ಲದೆ ಇಂದಿನ ಜೀವನ ಶೈಲಿಯ ವೇಗ ಮತ್ತು ವಿಧಾನಗಳಿಗೆ ಹೊಂದಿಕೊಳ್ಳಲು ಸಾಧ್ಯವಾಗಲಾರದು ಎಂಬ ಭಾವನೆಯಿದೆ, ಆದ್ದರಿಂದ ಮೊದಲನೆ ತರಗತಿಯಿಂದಲೇ ಗಣಕ ಯಂತ್ರಗಳನ್ನು ಉಪಯೋಗಿಸಿ ದೃಶ್ಯಮಾಧ್ಯಮದ ಮುಖಾಂತರ ವಿದ್ಯಾಭ್ಯಾಸವನ್ನು ಕೊಡಲು ಉದ್ದೇಶಿಸಲಾಗಿದೆ. ಅದರಂತೆ ಈಗಾಗಲೇ ಶ್ರೀ ಮಂಜುನಾಥ್, ಅಧ್ಯಕ್ಷರು ಮತ್ತು ಕಾರ್ಯನಿರ್ವಾಹಕರು, ಮ್ಯಾನ್‌ವಿಷ್ ಇನ್‌ಫೋಟೆಕ್ ಲಿಮಿಟೆಡ್ (Manwish Infotech Ltd.) ಇವರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ದೃಶ್ಯಮಾಧ್ಯಮದ ಮುಖಾಂತರ ಬೋಧನೆಗೆ ಬೇಕಾದ ಕಾರ್ಯಕ್ರಮ ರೂಪಿಸಿದ್ದಾರೆ.

ನಮ್ಮ ಸಂಘದ ಬೆಂಗಳೂರು ಶಾಖೆಯ ಪ್ರಪ್ರಥಮ ಪ್ರಯತ್ನವಾದ ಸಿದ್ಧಗಂಗಾ ಪ್ರತಿಷ್ಠಿತ ಶಾಲೆಯು ಪ್ರಾರಂಭವಾಗಿ ಶ್ರೀಮಠದ ಆಧ್ಯಾತ್ಮಿಕ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಬಿಂಬಿಸುವಂತಿದ್ದು, ಅದು ಜ್ಞಾನದ ಕಂಪನ್ನು ಬೀರುವ ಸುಂದರ ಕುಸುಮವಾಗಿ ಅರಳ ಬೇಕೆಂಬುದೇ ನಮ್ಮೆಲ್ಲರ ಅಪೇಕ್ಷೆ. ಇದರ ಯಶಸ್ಸಿಗೆ ಸ್ವಾಮೀಜಿಯವರ ಕೃಪಾಶೀರ್ವಾದ ಸಂಪೂರ್ಣವಾಗಿ ಇರುವುದರಿಂದ ಇದು ಬೃಹತ್ ಸಂಸ್ಥೆಯಾಗಿ, ಇಡೀ ಸಮಾಜದ ಹೆಮ್ಮೆಯ ಸಂಸ್ಥೆಯಾಗಿ ಬೆಳೆಯುವುದರಲ್ಲಿ ಯಾವುದೇ ಸಂಶಯವಿಲ್ಲ, ಇದಲ್ಲದೆ ಇಂತಹ ಹಲವು ಶಾಲೆಗಳನ್ನು ಅವಶ್ಯಕತೆಯ ಆಧಾರದ ಮೇಲೆ ಬೇರೆ ಬೇರೆ ಸ್ಥಳಗಳಲ್ಲಿ ಪ್ರಾರಂಭಿಸುವ ಸದುದ್ದೇಶ ಆಡಳಿತ ಮಂಡಳಿಗಿದೆ. ಇದಕ್ಕೆ ಜನತೆಯ ಸಹಕಾರ ಮತ್ತು ಪ್ರೋತ್ಸಾಹಗಳ ಅಗತ್ಯವಿದೆ. ಈ ಪ್ರಯತ್ನದಲ್ಲಿ ಎಲ್ಲರೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ತಮ್ಮ ಸಲಹೆ ಸೂಚನೆ ಗಳೊಂದಿಗೆ ಸಹಭಾಗಿಗಳಾಗಬೇಕೆಂದು ಪ್ರಾರ್ಥಿಸುತ್ತೇವೆ. ಇದೆಲ್ಲದರ ಪ್ರೇರಕಶಕ್ತಿಯಾಗಿ, ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರೂ, ತ್ರಿವಿಧ ದಾಸೋಹ ಮೂರ್ತಿಗಳೂ, ಪರಮ ಪೂಜ್ಯರೂ ಆದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ಶ್ರೀ ಶಿವಕುಮಾರಸ್ವಾಮಿಜಿಯವರಿಗೆ ಇದೇ ವರ್ಷದ ಏಪ್ರಿಲ್ ಒಂದನೇ ದಿನಾಂಕದಂದು ೯೪ ವರ್ಷಗಳು ಕಳೆದು ೯೫ನೇ ವರ್ಷಕ್ಕೆ ಪದಾರ್ಪಣೆ ಮಾಡುವವರಿದ್ದಾರೆ. ಅವರ ಸರಳ ಸಂಯಮ ಜೀವನ, ಮಾನವ ಸೇವೆಯಲ್ಲಿನ ಅದಮ್ಯ ಉತ್ಸಾಹ ಸದಾಕಾಲವೂ ದೀನದಲಿತರ, ಅಸಹಾಯಕರ ಹಾಗೂ ಬಡ ವಿದ್ಯಾರ್ಥಿಗಳ ಬಗೆಗಿನ ಚಿಂತನೆ, ಎಲ್ಲರಲ್ಲಿಯೂ ಈಶ್ವರನನ್ನೇ ಕಾಣುತ್ತಾ, ಜೀವನ ಮೌಲ್ಯಗಳನ್ನು ತಮ್ಮ ಜೀವನದಲ್ಲಿ ಅನುಷ್ಠಾನಗೊಳಿಸಿ ಕೊಂಡಿರುವ ಈ ಕರ್ಮಯೋಗಿಯು, ನಮ್ಮೊಡನಿರುವುದು ನಮ್ಮೆಲ್ಲರ ಸೌಭಾಗ್ಯ. ಈ ನಾಡಿನ, ಈ ರಾಷ್ಟ್ರದ ಮತ್ತು ವಿಶ್ವದ ಒಳಿತಿಗಾಗಿ ತಮ್ಮನ್ನೇ ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಮಹಾಚೇತನ. ಹನ್ನೆರಡನೇ ಶತಮಾನದ ಸಾಮಾಜಿಕ ಕ್ರಾಂತಿಯ ರೂವಾರಿ ಶ್ರೀ ಬಸವಣ್ಣನವರ ತತ್ವಾದರ್ಶಗಳಿಗೆ ಬದ್ಧರಾಗಿ ಮಹಾಮಾನವತಾವಾದಿ ಯಾಗಿರುವ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಇನ್ನೂ ನೂರ್ಕಾಲ ಬಾಳಿ, ಈ ರಾಷ್ಟ್ರದ ಸಮಸ್ತ ಜನತೆಗೆ ಮಾರ್ಗದರ್ಶನ ನೀಡುತ್ತಾ ಎಲ್ಲರ ಜೀವನದ ಸಾರ್ಥಕತೆಗೆ ಕಾರಣ ಪುರುಷರಾಗಲಿ ಎಂದು ಶ್ರೀ ಸಿದ್ಧಲಿಂಗೇಶ್ವರನಲ್ಲಿ ಭಕ್ತಿಯಿಂದ ಪ್ರಾರ್ಥಿಸೋಣ.



# ಅನ್ನದಾನಕ್ಕೊಂದು ಅಪೂರ್ವ ಅವಕಾಶ

ಹೆಚ್. ಗಂಗಾಧರನ್
೧೦೮೯, ವಿಷ್ಣುವರ್ಧನ ರಸ್ತೆ
ಚಾಮರಾಜಪುರ, ಮೈಸೂರು-೪



"ಅನ್ನಾದ್ಭವಂತಿ ಭೂತಾನಿ" ಅಂದರೆ ಅನ್ನದಿಂದಲೇ ನರ ಜೀವಿಗಳ ಉತ್ಪತ್ತಿ ಎಂದು ಗೀತೆಯಲ್ಲಿ ಹೇಳಿದೆ. ಎಲ್ಲ ಜೀವ ರಾಶಿಗಳ ಬದುಕು ಅನ್ನವನ್ನೇ ಆಶ್ರಯಿಸಿದೆ. ಅನ್ನದಾನಕ್ಕಿಂತ ಇನ್ನು ದಾನವಿಲ್ಲವೆಂಬ ಪ್ರಚಲಿತ ನಾಣ್ನುಡಿಯೊಂದಿದೆ. ತನ್ನಂತೆ ಮತ್ತೊಂದು ಜೀವಿಯು ಬದುಕಬೇಕೆಂಬ ಭಾವನೆ ಸೌಜನ್ಯ ಕ್ರಿಯಾಶೀಲ ವ್ಯಕ್ತಿಗಳಲ್ಲಿರ ಬೇಕು. ಅದಕ್ಕಾಗಿಯೇ ಭಾರತೀಯ ಸಂಸ್ಕೃತಿಯಲ್ಲಿ ಅನ್ನದಾನಕ್ಕೆ ಮಹತ್ವವಿದೆ. ಪ್ರಾಚೀನ ಧರ್ಮಶಾಸ್ತ್ರಗಳಲ್ಲಿ ಮಾನವ ಮಾಡುವ ಪಾಪಕ್ಕೆ ವಿವಿಧ ಪ್ರಾಯಶ್ಚಿತ್ತವನ್ನು ಹೇಳಿದೆ. ಅದರಲ್ಲಿ ಅನ್ನದಾನಕ್ಕೆ ಪ್ರಾಶಸ್ತ್ಯವನ್ನು ನೀಡಿದೆ.

ಶರಣ ಸಂಸ್ಕೃತಿಯಲ್ಲಿ ಅನ್ನದಾನಕ್ಕೆ ದಾಸೋಹ ಎಂಬ ಪವಿತ್ರ ಶಬ್ದವನ್ನು ಬಳಸಿದೆ. ಅಲ್ಲಮ ಪ್ರಭುಗಳು "ಅಣಿತೆಯೂ ಇದೆ, ಬತ್ತಿಯೂ ಇದೆ, ಜ್ಯೋತಿಯು ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ ? ಗುರುವಿದೆ, ಲಿಂಗವಿದೆ, ಶಿಷ್ಯನ ಸುಜ್ಞಾನವಂಕುರಿಸದನ್ನಕ್ಕರ ಭಕ್ತಿಯೆಲ್ಲಿಯದೋ? ಸೋಹ ಮೆಂಬದ ಕೇಳಿ, ದಾಸೋಹವ ಮಾಡದಿದ್ದರೆ ಅತಿಗಳೆದೆನು ಗುಹೇಶ್ವರಾ" ಎಂದಿದ್ದಾರೆ. ಶಿವನಾಗಿದ್ದೇನೆಂಬ ಭಾವನೆ ಯಿರಲಿ, ಐಕ್ಯ ಸ್ಥಾನವನ್ನು ಹೊಂದಿರಲಿ ದಾಸೋಹವ ಮಾಡದಿದ್ದರೆ ಅದು ನಿಷ್ಪ್ರಯೋಜನ ಎಂದಿದ್ದಾರೆ. ವೈರಾಗ್ಯ ಚಕ್ರವರ್ತಿಗಳಾದ ಪ್ರಭುದೇವರೇ ದಾಸೋಹ ತತ್ವವನ್ನು







ಪ್ರತಿಪಾದಿಸಿ ರುವುದು ನಮ್ಮ ಸಂಸ್ಕೃತಿಯ ವೈಶಿಷ್ಟ್ಯ. ಅದನ್ನು ಸಮರ್ಥನೀಯವಾಗಿ ಪ್ರತಿಪಾದಿಸಿದ ಷಣ್ಮುಖಸ್ವಾಮಿ ಯವರು

"ಸೋಹಂ ಎಂದಡೆ ಅಂತರಂಗದಗರ್ವ, ಶಿವೋಹಂ ಎಂದಡೆ ಬಹಿರಂಗದ ಅಹಂಕಾರ, ಈ ಉಭಯವನಳಿದು ದಾಸೋಹಂ ಭಾವವನೆ ಕರುಣಿಸಿ ಬದುಕಿಸಯ್ಯಾ ಅಖಂಡೇಶ್ವರಾ" ಎಂದಿದ್ದಾರೆ.

ಶರಣರ ದಾಸೋಹ ಸಂಸ್ಕೃತಿಯಲ್ಲಿ ಕೊಡುವವನು ಹಿರಿಯನು ಪಡೆವವನು ಕಿರಿಯನೆಂಬ ಭಾವನೆಗೆ ಅವಕಾಶವಿಲ್ಲ. ದಾಸೋಹದಲ್ಲಿ ಭಗವಂತನಿಗೆ ಅರ್ಪಿಸುವನೆಂಬ ಪೂಜ್ಯ ಭಾವನೆಯಿದೆ. ಅದರಂತೆ ಸ್ವೀಕರಿಸುವವನೂ ಸಹ ತಾನು ಹಿರಿಯನೆಂಬ ಅಹಂಭಾವನೆಗೆ ಅವಕಾಶವಿಲ್ಲ. ಅದನ್ನು ಪ್ರಸಾದ ಅಂದರೆ ಭಗವಂತನ ಕೃಪೆಯಿಂದ ದೊರೆತುದು ಎಂಬ ಪವಿತ್ರ ಭಾವನೆಯಿರುತ್ತದೆ. ಇದು ಅನ್ನದಾನದ ವೈಶಿಷ್ಟ್ಯ. ಇದು ಮಾನವ ತನ್ನ ಜೀವನದಲ್ಲಿಗಳಿಸುವ ಪುಣ್ಯ ಸಂಪತ್ತು. ಇಂತಹ ಸಂಪತ್ತನ್ನು ಗಳಿಸುವುದಕ್ಕಾಗಿ ಮನೆಗಳಲ್ಲಿ ನಡೆಯುವ, ವಿವಾಹ, ಜನ್ಮದಿನೋತ್ಸವ, ಹಬ್ಬಹರಿ ದಿನಗಳಲ್ಲಿ ಮೃತರ ಆತ್ಮಶಾಂತಿಗಾಗಿ ನಡೆಸುವ ಸಮಾರಾಧನೆಗಳಲ್ಲಿ ಸಹ ಅನ್ನದಾನ ನಡೆಯುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ನಡೆಯುವ ಮೇಲ್ಕಂಡ ವ್ಯವಹಾರಗಳಲ್ಲಿ ದಾಸೋಹ ಮತ್ತು ಪ್ರಸಾದ ಭಾವನೆಗಳು ಮಾಯವಾಗಿವೆ. ಕೆಲವರಿಗೆ ತಮ್ಮ ಶ್ರೀಮಂತಿಕೆಯ ಪ್ರದರ್ಶನ ವಾದರೆ ಸಾಮಾನ್ಯರಿಗೆ ಶ್ರೀಮಂತರಂತೆ ತೋರಿ ಕೊಳ್ಳುವ ಹಂಬಲವಾಗಿ ಪರಿಣಮಿಸಿದೆ.

ಭಾರತೀಯ ಸಂಸ್ಕೃತಿಯಲ್ಲಿ ಹಿಂದೆ ರೈತ ತಾನು ಬೆಳೆದ ಬೆಳೆಯಲ್ಲಿ ಸ್ವಲ್ಪಭಾಗವನ್ನು ಮೊದಲು ಮಠಗಳಿಗೆ ಅರ್ಪಿಸುತ್ತಿದ್ದ. ಅದರಿಂದ ಪ್ರತಿ ಗ್ರಾಮದಲ್ಲಿ ಮಠಗಳು ಇರುತ್ತಿದ್ದವು. ಅಲ್ಲಿ ಆಗಂತುಕರಿಗೆ, ಅನಾಥರಿಗೆ, ಅಶಕ್ತರಿಗೆ ಅನ್ನದಾನ ನಡೆಯುತ್ತಿತ್ತು. ಮಠಗಳ ಘನ ಉದ್ದೇಶವೇ ದಾಸೋಹವಾಗಿತ್ತು. ಭಕ್ತರಿಂದ ಪಡೆದು ಸಮಾಜಕ್ಕೆ ನೀಡುವ ಕಾಯಕದಲ್ಲಿ ಮಠಗಳು ನಿರತವಾಗಿರಬೇಕೆಂಬುದೇ ಮಠಗಳ ಸ್ಥಾಪನೆಯ ಉದ್ದೇಶವಷ್ಟೇ?

ಮೈಸೂರು ಜಿಲ್ಲೆಯಲ್ಲಿ ಒಂದು ಶತಮಾನದ ಹಿಂದೆ ಬಂದ ಶ್ರೀ ಗುರುಮಲ್ಲೇಶ್ವರರ ಸಾಂಸ್ಕೃತಿಕ ಪರಂಪರೆ ಯೊಂದು ಬೆಳೆದು ಬಂದಿದೆ. ಪ್ರತಿಯೊಂದು ಹಳ್ಳಿಯಲ್ಲೂ ಭಿಕ್ಷದ ಮಠಗಳಿರುತ್ತವೆ. ಆಯಾ ಮಠದ ಶರಣರೊಬ್ಬರು ಸಕಾಲಕ್ಕೆ ಭಕ್ತರ ಮನೆಗೆ ಹೋಗಿ ಅವರು ಭಕ್ತಿಯಿಂದ ನೀಡಿದ ಆಹಾರವನ್ನು ಭಕ್ತರಿಗೆ ವಿನಿಯೋಗಿಸುವ ದಾಸೋಹ ಕಾಯಕ ಇಂದಿಗೂ ನಡೆಯುತ್ತಾ ಬಂದಿದೆ. ನೀಡುವವರು ಸಂತೋಷದಿಂದ ಪೂಜ್ಯ ಭಾವನೆಯಿಂದ ನೀಡುತ್ತಾರೆ. ದಾಸೋಹದ ಹಿನ್ನೆಲೆಯಲ್ಲಿರುವುದು ಮಾನವ ಅಗತ್ಯವಾಗಿ ಗಳಿಸಬೇಕಾದ ಪುಣ್ಯ ಸಂಚಯ. ಅದಕ್ಕಾಗಿಯೇ ಜನರ ಮನೆಗಳಲ್ಲಿ ನಡೆಯುವ ಶುಭ ಕಾರ್ಯಗಳಲ್ಲಿ ಪಿತೃಪಿತಾಮಹರ ಸ್ಮರಣಾರ್ಥ ನಡೆಸುವ ಸಮಾರಾಧನೆಗಳಲ್ಲಿ ಅನ್ನದಾನಮಾಡಿ ತೃಪ್ತಿ ಪಡೆಯುತ್ತಾರೆ. ಇಂದಿನ ನವನಾಗರಿಕ ಪರಿಸ್ಥಿತಿಯಲ್ಲಿ ತತ್ವಗಳ ಅರ್ಥವೇ ಬದಲಾವಣೆಯಾಗುತ್ತಿದೆ. ಅದರೂ ನಾವು ನಮ್ಮ ಸಂಸ್ಕೃತಿಯ ರಕ್ಷಣೆಗೆ ಶ್ರಮಿಸುವುದು ಅಗತ್ಯ. ಡಂಭಾಚಾರ ಕ್ಕಾಗಿ ವೆಚ್ಚ ಮಾಡುವುದನ್ನು ಬಿಟ್ಟು ಸದ್ವಿನಿಯೋಗವಾಗಿ ಸತ್ಫಲವನ್ನು ಪಡೆಯಬೇಕು.

ಇಂತಹ ಕಾರ್ಯಕ್ಕಾಗಿ ಅನೇಕ ಮಠಗಳಲ್ಲಿ ವ್ಯವಸ್ಥಿತ ಕಾರ್ಯಗಳು ನಡೆಯುತ್ತಿವೆ. ತುಮಕೂರು ಜಿಲ್ಲೆಯ ಶ್ರೀ ಸಿದ್ಧಗಂಗಾ ಮಠದಲ್ಲಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ತಮಿಳುನಾಡು ಪ್ರಾಂತ್ಯಗಳಿಂದ ಬಂದು ಅಧ್ಯಯನ ಮಾಡುವರ ಮಕ್ಕಳ ಸಂಖ್ಯೆ ಎಂಟು ಸಾವಿರವನ್ನು ಮುಟ್ಟಿದೆ. ಇಲ್ಲಿ ಜಾತಿ ಮತ ಭೇದವಿಲ್ಲ. ಪ್ರತಿದಿನ ನೂರಾರು ಜನ ಮಕ್ಕಳ ಪೋಷಕರು, ಪ್ರವಾಸಿಗಳು, ಶ್ರೀಕ್ಷೇತ್ರದ ಭಕ್ತರು ಆಗಮಿಸುತ್ತಾರೆ. ಅವರೆಲ್ಲರಿಗೆ ದಾಸೋಹ ನಡೆಯಬೇಕು. ಸ್ವಂತ ಆಸ್ತಿಯ ಬೆಂಬಲವಿಲ್ಲದಿದ್ದರೂ ಶ್ರೀಗಳವರ ಆತ್ಮಬಲ ಮತ್ತು ಭಕ್ತರ ಬಲದ ಮೇಲೆಯೇ ಕಾಯಕ ನಡೆಯುತ್ತಿದೆ. ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳುವ ಅಪೂರ್ವ ಅವಕಾಶವನ್ನು ಶ್ರೀಗಳವರು ಅನುಗ್ರಹಿಸಿದ್ದಾರೆ. ಹಿರಿಯ ವಿದ್ಯಾರ್ಥಿಗಳ ಸಂಘ ಕಾರ್ಯವೊಂದನ್ನು ನಿಯೋಜಿಸಿದೆ. ಅದಕ್ಕಾಗಿ ನಾವು ಅಭಿನಂದಿಸಬೇಕು ಈ ಯೋಜನೆಯಂತೆ ಯಾರಾದರೂ ತಮ್ಮ ಜನ್ಮ ದಿನದ ಸ್ಮರಣೆ, ಮಕ್ಕಳ ಜನ್ಮದಿನ ಸ್ಮರಣೆ, ಮಕ್ಕಳ ವಿವಾಹಾದಿ ಶುಭಕಾರ್ಯಗಳ ಸ್ಮರಣೆ, ಪಿತೃಗಳ ಪಿತಾಮಹರ ಸ್ಮರಣೆ, ಪತಿಪತ್ನಿಯರ ಸ್ಮರಣಾರ್ಥ ನಿರಂತರ ದಾಸೋಹ ನಡೆಯುವಂತೆ ವ್ಯವಸ್ಥೆ ಮಾಡಲು ಅವಕಾಶವಿದೆ. ಪುಣ್ಯಫಲಾಪೇಕ್ಷೆಗಳಾದ ಮಹನೀಯರು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಧನ್ಯರಾಗ ಬೇಕು.

**ಯೋಜನೆಯ ನಿರೂಪಣೆ**

ಈ ಯೋಜನೆಯಂತೆ ಮಹನೀಯರು ಕೊನೆಯ ಪಕ್ಷ ಎರಡು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹ ನಿಧಿಗೆ ಅರ್ಪಿಸಿದರೆ ಅದನ್ನು ಶಾಶ್ವತ ನಿಧಿಯಾಗಿಟ್ಟು (Fixed Deposit) ಅದರ ಬಡ್ಡಿ ಹಣವನ್ನು ಮಾತ್ರ ದಾಸೋಹಕ್ಕೆ ಬಳಸಲಾಗುತ್ತದೆ. ತಾವು ಅಪೇಕ್ಷಿಸಿದ ದಿನ ಅವರ ಹೆಸರಿನಲ್ಲಿ ಶ್ರೀಕ್ಷೇತ್ರದ ಸ್ವಾಮಿಯ ಸನ್ನಿಧಿಯಲ್ಲಿ ಆ ದಿನ ಅವರ ಹೆಸರಿನಲ್ಲಿ ಸಂಕಲ್ಪ ಮಾಡಿ ಅವರಿಗೆ ಶ್ರೇಯಸ್ಸನ್ನು ಪ್ರಾರ್ಥಿಸಿ ದಾಸೋಹ ಸೇವೆ ನಡೆಸಲಾಗುವುದು. ಪ್ರತಿವರ್ಷ ಅವರು ಬಯಸಿದಲ್ಲಿ ದಾಸೋಹ ಸೇವೆಯ ಮುನ್ಸೂಚನೆಯನ್ನು ದಾನಿಗಳಿಗೆ ವಿನಂತಿಸಲಾಗುವುದು. ಅಪೇಕ್ಷೆವಿರುವವರು ಆ ದಿನ ಶ್ರೀಕ್ಷೇತ್ರಕ್ಕೆ ಆಗಮಿಸಿ ಶ್ರೀ ಗುರುಕೃಪೆ ಪಡೆದು ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳಬಹುದು. ಅವರು ಬರಲಿ, ಬಾರದಿರಲಿ, ಪ್ರತಿವರ್ಷ ಆ ಬಡ್ಡಿ ಹಣದಿಂದ ಅವರ ಹೆಸರಿನಲ್ಲಿ ನಿರಂತರವಾಗಿ ಈ ಸೇವೆ ಸಲ್ಲಿಸುವ ವ್ಯವಸ್ಥೆ ಮಾಡಿದೆ. ಅವರು ಬರಲಾಗದಿದ್ದರೆ ಅವರಿಗೆ ಶ್ರೀ ಗುರುಕೃಪೆಯಿಂದ ಆಶೀರ್ವಾದ ಪ್ರಸಾದವನ್ನು ಅಂಚೆ ಮೂಲಕ ಕಳುಹಿಸಲಾಗುವುದು. ನಾವು ಸಲ್ಲಿಸುವ ಸೇವೆ ಅಲ್ಪವಾಗಬಹುದು. ನಾವು ನೀಡುವ ಮೊತ್ತದ ಪ್ರತಿಫಲ ಅಲ್ಪವಾಗಬಹುದು. ಆದರೆ ಕೊನೆಯ ಪಕ್ಷ ೫-೧೦ ಮಕ್ಕಳಿಗಾದರೂ ನಿರಂತರವಾಗಿ ಒಂದು ಹೊತ್ತಿನ ಪ್ರಸಾದ ವಿನಿಯೋಗವಾಗುತ್ತದೆ. ಮಕ್ಕಳು ಅಪ್ರತ್ಯಕ್ಷವಾಗಿ ನಮ್ಮನ್ನು ಹರಸುತ್ತಾರೆ. ದಾನಿಗಳ ಹೆಸರನ್ನು ಪ್ರತಿ ತಿಂಗಳೂ ಸಿದ್ಧಗಂಗಾ ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ. ನಾವು ನಮ್ಮ ಹುಟ್ಟಿದ ದಿನವನ್ನು, ನಮ್ಮ ಮಕ್ಕಳು ಲಗ್ನವಾದ ದಿನವನ್ನು, ನಮ್ಮ ಮಾತಾಪಿತೃಗಳು ಇಹಲೋಕ ಬಿಟ್ಟ ದಿನವನ್ನು ನಾವೇ ಮರೆತು ಬಿಡುತ್ತೇವೆ. ನಮ್ಮ ಕಾಲಾನಂತರ ನಮ್ಮ ಮಕ್ಕಳು, ಮೊಮ್ಮಕ್ಕಳು ಅದನ್ನು ಸ್ಮರಿಸಲಾರರು. ಆದುದರಿಂದ ಶ್ರೀಕ್ಷೇತ್ರದ ಈ ಸೇವೆಯಲ್ಲಿ ಪಾಲ್ಗೊಂಡರೆ ನಮ್ಮ ವಂಶಪಾರಂಪರ್ಯವಾಗಿ ನಮ್ಮ ಅಪೇಕ್ಷಿತ ದಾಸೋಹ ಸೇವೆ ನಡೆಯುವುದಲ್ಲದೆ ಅದನ್ನು ನಮ್ಮ ಸ್ಮರಣೆಗೆ ತರುವ ಕಾರ್ಯ ಈಯೋಜನೆಯಲ್ಲಿದೆ. ಅಪೇಕ್ಷಿಸಿದ ಮೊತ್ತ ಒಬ್ಬರ ಜೀವನದಲ್ಲಿ ಅಧಿಕವಲ್ಲ. ಅವರ ಹಣ ವ್ಯರ್ಥವಲ್ಲ. ಆದರೆ ಅದರ ಫಲ ನಿರಂತರ ಲಭ್ಯ. ಆದರಿಂದ ಹತ್ತಾರು ಮಕ್ಕಳ ಅಭ್ಯುದಯ, ಸಮಾಜದ ಉನ್ನತಿಗೆ ನಮ್ಮ ಅಲ್ಪ ಕಾಣಿಕೆ. ಅದು ಅಲ್ಪವಾದರೂ ಸಫಲ, ಸದ್ವಿನಿಯೋಗ. ಇಂತಹ ಯೋಜನೆಯಲ್ಲಿ ಪಾಲ್ಗೊಳ್ಳುವ ಭಾಗ್ಯ ಸರ್ವರಿಗೂ ಲಭ್ಯವಾಗಲೆಂದು ಬಯಸುವ, ಇಂತಹ ಯೋಜನೆಗೆ ಅನುಮತಿ ನೀಡಿದ ಮಹಾಯೋಗೀವರ್ಯರಾದ ಪೂಜ್ಯಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಚರಣಾರವಂದಕ್ಕೆ ಪ್ರಣಾಮಗಳು. ಈ ಯೋಜನೆಯನ್ನು ಕಾರ್ಯಗತ ಗೊಳಿಸಲು ಸಾಮಾಜಿಕ ಪ್ರಯತ್ನ ನಡೆಸುತ್ತಿರುವ ಹಿರಿಯ ವಿದ್ಯಾರ್ಥಿ ಸಂಘಕ್ಕೆ ಅಭಿನಂದನೆಗಳು.









# ಸಾಹಿತ್ಯ ಸಮ್ಮೇಳನ ಭಾಷೆಯ ಜೀವಂತಿಕೆಯ ಲಕ್ಷಣ - ಪರಮಪೂಜ್ಯ ಶ್ರೀಗಳು

ಸಂದರ್ಶನ : ಕವಿತಾಕೃಷ್ಣ
ಖ್ಯಾತ ಸಾಹಿತ್ಯಗಳು, ಕ್ಯಾತ್ಸಂದ್ರ

**ಡಾ.** ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಶತಮಾನದ ಶಕಪುರುಷರು. ತ್ರಿವಿಧ ದಾಸೋಹಿಗಳು. ಧರ್ಮಕ್ಷೇತ್ರದಲ್ಲಿ ನಂದಾದೀಪಿಗೆ ಹಚ್ಚಿದ ಆಚಾರ್ಯ ಪುರುಷರು. ಸಾಹಿತ್ಯ-ಶಿಕ್ಷಣ-ಸಾಮಾಜಿಕ-ಸಾಂಸ್ಕೃತಿಕ ಕ್ಷೇತ್ರಗಳಿಗೆ ಅವರು ನೀಡಿದ ಕೊಡುಗೆ ಅನೂಹ್ಯವಾದುದು. ತುಮಕೂರು ಜಿಲ್ಲೆ ಎಂದ ಕೂಡಲೇ ಮೊದಲು ನೆನಪಿಗೆ ಬರುವ ಆದ್ಯಪುರುಷರೆಂದರೆ ಸಿದ್ಧಗಂಗಾ ಶ್ರೀಗಳು. ಇದೀಗ ತುಮಕೂರಿನಲ್ಲಿ ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಜರುಗುತ್ತಿದೆ. ಶ್ರೀಗಳು ಮಹಾ ಪೋಷಕರಾಗಿದ್ದಾರೆ. ಸಮ್ಮೇಳನ ಜರುಗುತ್ತಿರುವ ಹಿನ್ನೆಲೆಯಲ್ಲಿ ಶ್ರೀಗಳನ್ನು ಸಂದರ್ಶಿಸಲಾಗಿದ್ದು ಅದರ ಸಾರಸಂಗ್ರಹ ಇಂತಿದೆ.

***ಸಾಹಿತ್ಯದ ಹಿರಿಮೆ-ಗರಿಮೆಗಳೇನು ? ಅದು ನಮ್ಮ ಬದುಕಿಗೆ ಎಷ್ಟು ಉಚಿತ ?***

ಸಾಹಿತ್ಯವು ಮಾನವನ ಮೃಗೀಯ ಭಾವನೆಗಳನ್ನು ಹೋಗಲಾಡಿಸುವಂತದ್ದು, ಮಾನವ ಮೂಲತಃ ಸ್ವಾರ್ಥಿ. ಆತನನ್ನು ಸಂಸ್ಕಾರಗೊಳಿಸುವಲ್ಲಿ ಸಾಹಿತ್ಯವು ತುಂಬಾ ಪ್ರಭಾವಯುತವಾದುದು. ಮಾನವರಲ್ಲಿ ಸಂಸ್ಕೃತಿಯನ್ನು ರೂಪಿಸುವಲ್ಲಿ ಅದು ಪ್ರಧಾನಪಾತ್ರ ವಹಿಸುವಂತದ್ದಾಗಿದೆ. ಮಾನವನು ವಿಶ್ವಮಾನವನಾಗಲು ಅದು ಸಹಕಾರಿ. ಹೀಗಾಗಿ ಸಾಹಿತ್ಯವು ನಮ್ಮ ಬದುಕಿಗೆ ಅತ್ಯಗತ್ಯ. ಗಾಳಿ-ನೀರು-ಆಹಾರಗಳಷ್ಟೇ ಮುಖ್ಯ.

***ನಮ್ಮ ಕನ್ನಡ ಸಾಹಿತ್ಯದ ಬೆಳವಣಿಗೆ ಬಗ್ಗೆ ತಮ್ಮ ಅನಿಸಿಕೆ ಏನು?***

ಭಾರತೀಯ ಸಾಹಿತ್ಯದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆ ತುಂಬಾ ಗಮನಾರ್ಹವಾಗಿದೆ. ಪ್ರಾಚೀನ ಕಾಲದಿಂದಲೂ ಅದು ಸಂಪದ್ಭರಿತವಾಗಿ ಬೆಳೆದು ಬಂದಿದೆ. ಪಂಪಮಹಾಕವಿ ಅಸಮಾನ್ಯವಾದ ಕವಿ, ಅವನ ಸಮಕಾಲೀನರು ನೀಡಿದ ಕಾಣಿಕೆ ಮಹತ್ತರವಾದುದು. ಲೌಕಿಕ ಆಲೌಕಿಕಗಳೆರಡನ್ನು ಪುರಸ್ಕರಿಸಿದರು. ಹಾಗೆಯೇ ಶರಣರ ಸಾಹಿತ್ಯವಾಗಲಿ, ದಾಸಸಾಹಿತ್ಯವಾಗಲಿ ಸಾಧಾರಣವಾದುದೆ? ಅದು ಶ್ರೀ ಸಾಮಾನ್ಯರ, ಸಹಜ-ಸುಂದರವಾದ ಸಾಹಿತ್ಯವಾಗಿತ್ತು. ಜನಮುಖಿಯಾಗಿತ್ತು. ಹರಿಹರ-ರಾಘವಾಂಕ-ಕುಮಾರ ವ್ಯಾಸರ ಕೊಡುಗೆ ಬಹುದೊಡ್ಡದು. ಎಲ್ಲಾ ಬಗೆಯ ಸಾಹಿತ್ಯವೂ ಕನ್ನಡಲ್ಲಿದೆ. ಈಚಿನ ಸಾಧನೆಯೇನು ಸಾಮಾನ್ಯವೇ? ಕನ್ನಡ ಭಾಷೆಯಲ್ಲಿ ಸಾಹಿತ್ಯದ ಬೆಳವಣಿಗೆ ಉನ್ನತ ಸ್ತರಮುಟ್ಟಿದೆ. ನಮಗಂತೂ ಕನ್ನಡ ಸಾಹಿತ್ಯ ಸಂಪನ್ನವಾಗಿರುವುದು ಸಂತೋಷವಾಗಿದೆ.

***ಸಂಸ್ಕೃತ ಭಾಷೆಯು ಕನ್ನಡ ಭಾಷೆಯ ಬೆಳವಣಿಗೆಗೆ ಮಾರಕವಾಗಿತ್ತು ಎಂಬ ಅಭಿಪ್ರಾಯವಿದೆ. ಈ ವಿಷಯದಲ್ಲಿ ತಮ್ಮ ಅಭಿಪ್ರಾಯವೇನು ?***

ನಾವು ಕಟ್ಟಿದ ಮನೆಗೆ ಒಳ್ಳೆಯ ಗಾಳಿ, ಬೆಳಕು ಬಂದರೆ ಅದು ಆರೋಗ್ಯಕರ ಅಲ್ಲವೆ ? ಕಿಟಕಿ ಬಾಗಿಲುಗಳ ಮುಖಾಂತರ ಉತ್ತಮವಾದ ಗಾಳಿ-ಬೆಳಕು ಬಂದರೆ ಚೆನ್ನ ಅಲ್ಲವೇ ?! ಸಂಸ್ಕೃತ ಭಾಷೆ ವಿಪುಲವಾದುದು. ಅದೊಂದು ಜ್ಞಾನದ ಭಂಡಾರ. ವಿಜ್ಞಾನ-ಸುಜ್ಞಾನಗಳ ಸಾಗರ. ನಮಗೆ ಬೇಕಾದುದೆಲ್ಲವೂ ಅಲ್ಲಿದೆ. ಅದನ್ನು ಸ್ವೀಕರಿಸುವುದು ತಪ್ಪೆ? ಕನ್ನಡದ ಮನೆಗೆ ಗಾಳಿ-ಬೆಳಕಾಗಿದ್ದ ಸಂಸ್ಕೃತ ಭಾಷೆ ಕನ್ನಡಕ್ಕೆ ಮಾರಕ ಎಂಬುದು ಒಪ್ಪುವ ಮಾತಲ್ಲ. ಈ ದೂರಿನಲ್ಲಿ ಹುರುಳಿಲ್ಲ. ಕನ್ನಡವು ಸಂಸ್ಕೃತ ಭಾಷೆಯಿಂದ ಮತ್ತಷ್ಟು ಸಶಕ್ತವಾಗಿದೆ. ಇದು ಒಪ್ಪು ಮಾತಾಗಿದೆ.

***ಕನ್ನಡ ಸಾಹಿತ್ಯ ಸಮ್ಮೇಳನಗಳು ಇಂದಿನ ಹೈಟೆಕ್ ಯುಗದಲ್ಲಿ ಅಗತ್ಯವೆ ?***

ಅವಶಮ್ಯವಾಗಿ ವಿಜ್ಞಾನ ಬರುತ್ತಿದೆ. ಪರಿವರ್ತನೆಯಾಗುತ್ತಿದೆ. ಆದರೆ, ಸಾಹಿತ್ಯ-ಸಂಸ್ಕೃತಿಗಳು ಹಾಗಲ್ಲ. ಅವುಗಳು ಲೋಕ ಇರುವವರೆವಿಗೂ ಅಗತ್ಯ, ಒಂದು ಭಾಷೆಯಲ್ಲಿ ಸಾಹಿತ್ಯ ಸಮ್ಮೇಳನ ಜರುಗುತ್ತಿದೆಯೆಂದರೆ ಅದು ಆ ಭಾಷೆಯು ಜೀವಂತಿಕೆಯಾಗಿ ಉಳಿದಿದೆ. ವಿಪುಲವಾಗಿ ಬೆಳೆದಿದೆ ಎಂಬುದನ್ನು ತೋರುತ್ತದೆ. ರೈತರಿಗೆ ಸುಗ್ಗಿಯ ಕಾಲ ಎಷ್ಟು ಮುಖ್ಯವೋ ಹಾಗೆಯೇ ಭಾಷಾ ಪ್ರೇಮಿಗಳಿಗೆ; ಸಾಹಿತ್ಯ ಪ್ರೇಮಿಗಳಿಗೆ ಸಮ್ಮೇಳನ ಅಷ್ಟೇ ಮುಖ್ಯ.

***ಸಮ್ಮೇಳನಗಳನ್ನು ಜಾತ್ರೆಗೆ ಹೋಲಿಸುವರಲ್ಲ, ಸರಿಯೇ?***

ಸರಿ, ಜಾತ್ರೆ ಜನತೆಗೆ ಲಾಭದಾಯಕವಾದುದು, ಹಾಗೆಯೇ ಸಾಹಿತ್ಯ ಪ್ರಿಯರಿಗೆ ಸಮ್ಮೇಳನ ಲಾಭದಾಯಕ ವಾದುದು, ಈ ರೀತಿಯ ಹೋಲಿಕೆ ಸರಿ ಎಂದೆ ನಮ್ಮ ಭಾವನೆ. ನಮ್ಮ ಶ್ರೀಮಠ ಜಾತ್ರೆಯಿಂದ ಪ್ರಯೋಜನವನ್ನು ಕಂಡಿದೆ.

*ತಾವು ೩೯ ವರ್ಷಗಳ ಹಿಂದೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನಡೆಸಿದ್ದಿರಿ. ಈಗ ೬೯ನೆಯ ಸಮ್ಮೇಳನವನ್ನೂ ನಡೆಸುತ್ತಿರುವಿರಿ. ಈ ಎರಡೂ ಸಮ್ಮೇಳನಗಳಲ್ಲಿ ಕಂಡ ವ್ಯತ್ಯಾಸವೇನು ?*

ಸಮ್ಮೇಳನಗಳ ಉದ್ದೇಶ ಎಲ್ಲಾ ಕಾಲಕ್ಕೂ ಒಂದೇ. ಅದು ನೀಡುವ ಫಲದ ಮೇಲೆ ಯಶಸ್ಸು ಅವಲಂಬಿಸಿರುತ್ತದೆ. ಸಾಹಿತ್ಯದ ಮಹತ್ವ-ಪ್ರಭಾವ -ಪ್ರೇರಣೆ-ಮಾರ್ಗದರ್ಶನ ಹಿಂದೆಯೂ ಇತ್ತು. ಇಂದೂ ಇದೆ. ಆದರೆ, ಆಚರಣೆ ವಿಧಾನ ಕೊಂಚ ಬದಲಾವಣೆ ಯಾಗಿದೆ. ಇಂದು ಜನತೆಯಲ್ಲಿ ಚಿಂತನ ಶಕ್ತಿ ಮತ್ತಷ್ಟು ಹೆಚ್ಚ ಬೇಕಾಗಿದೆ.

*ಸಾಹಿತ್ಯ ಸಮ್ಮೇಳನಗಳು ಶ್ರೀಸಾಮಾನ್ಯರ ಮೇಲೆ ಪ್ರಭಾವ ಬೀರಬಲ್ಲವೆ ?*

ಖಂಡಿತ, ಯಾವಾಗಲೂ ಪ್ರಭಾವ ಎರಡು ಬಗೆಯದ್ದಾಗಿರುತ್ತದೆ. ಒಂದು ಪ್ರತ್ಯಕ್ಷ, ಮತ್ತೊಂದು ಪರೋಕ್ಷ. ವಿದ್ಯಾವಂತರ ಮೇಲೆ, ನಾಗರೀಕರ ಮೇಲೆ ಪ್ರತ್ಯಕ್ಷ ಪ್ರಭಾವವಾದರೆ, ಶ್ರೀಸಾಮಾನ್ಯರ ಮೇಲೆ ಪರೋಕ್ಷ ಪ್ರಭಾವ ಬೀರುತ್ತದೆ. ವಚನಕಾಲದಲ್ಲಿ ಪರೋಕ್ಷ ಪ್ರಭಾವ ಅಪಾರವಾಗಿ ಆಯಿತು. ಸಾಹಿತ್ಯ ರಚನೆ ಅರಮನೆ-ಗುರು ಮನೆಗಳಲ್ಲಿ ಮಾತ್ರ ಆಗದೆ ಗುಡಿಸಲು ಜೋಪಡಿಗಳಲ್ಲೂ ಆಯಿತು ಎಂಬುದನ್ನು ಮರೆಯ ಬಾರದು. ಯಾವುದೇ ಬಗೆಯ ಸಮ್ಮೇಳನವಾಗಲಿ ಉತ್ತಮ ಆಕಾಂಕ್ಷೆ ಗಳನ್ನೊತ್ತು ನಡೆದರೆ ಶ್ರೀಸಾಮಾನ್ಯರ ಮೇಲೆ ಪ್ರಭಾವ ಬೀರಬಲ್ಲದು.

*ಭಾರತೀಯರ ಹಿರಿಮೆ ಏನು ?*

ಜಗತ್ತಿಗೆ ಬೆಳಕನ್ನು, ಜ್ಞಾನವನ್ನು ಮೊದಲಿಗೆ ನೀಡಿದವರು ಭಾರತೀಯರು, ಅದೇ ಅವರ ಹಿರಿಮೆ.

*ಕನ್ನಡಿಗರ ಹಿರಿಮೆ ಏನು ?*

ಭಾರತೀಯರ ಪಡಿರೂಪವೇ ಕನ್ನಡಿಗರು. ಕನ್ನಡಿಗರು ಸರಳತೆಗೆ ಮನಸೋಲುವವರು. ಸೌಜನ್ಯ ಶೀಲರು, ತುಂಬಾ ಉದಾರಿಗಳು. ಮಾನವತಾವಾದಿಗಳು. ಧರ್ಮಪ್ರಿಯರು.

*ನಮ್ಮ ಜನ ಧರ್ಮದ ಬಗ್ಗೆ ತಿರಸ್ಕಾರ ತಾಳಲು ಕಾರಣ ?*

ನಮ್ಮ ಜನ ಪಾಶ್ಚಾತ್ಯ ಸಂಸ್ಕೃತಿಯಿಂದ ಪ್ರಭಾವಿತರಾಗಿರುವುದೇ ಕಾರಣ.

*ಧರ್ಮವು ಭರತಖಂಡ ಎಂಬ ಅಪವಾದವಿದೆ. ಈ ಬಗ್ಗೆ ತಮ್ಮ ಅಭಿಪ್ರಾಯವೇನು ?*

ಇದು ಅಜ್ಞಾನದ ಪರಮಾವಧಿ ಮಾತಾಯಿತು, 'ಅಹಂ ಬ್ರಹ್ಮಾಸ್ಮಿ', 'ತತ್ವಮಸಿ' ಎಂದು ಯಾರು ಹೇಳ ಬಲ್ಲರು ? ನೀನು ಸಾಮಾನ್ಯನಲ್ಲ; ನೀನು ಬ್ರಹ್ಮನಾಗಿರುವೆ. ದೇವರಾಗಿರುವೆ. ಅವನು ನೀನೇ ಆಗಿರುವೆ. ಧೀರ ಘೋಷಣೆಯನ್ನು ಜಗತ್ತಿನಲ್ಲಿ ಇನ್ನಾರು ಮಾಡಬಲ್ಲರು ? ಸಾವಿರಾರು ವರ್ಷಗಳಿಂದ ಈ ಮಾತನ್ನು ಪದೇ ಪದೇ ಕೇಳುತ್ತಾ ಬಂದವರು, ಇಂದು ತೀರಾ ಕೆಳಮಟ್ಟಕ್ಕೆ ಇಳಿದಿದ್ದೇವೆ. ಧರ್ಮದ ಬಗ್ಗೆ ಜಾಗೃತರಾಗುವುದು ಒಳಿತು. ತಿರಸ್ಕಾರ ಭಾವನೆ ತಾಳಿದರೆ ಅದು ನಮ್ಮ ಪತನಕ್ಕೆ ಕಾರಣವಾದೀತು.

*ಸ್ವಾತಂತ್ರ್ಯದ ಫಲ ಅರ್ಥವತ್ತಾಗಲು ಏನು ಮಾಡಬೇಕು ?*

ಮಹಾತ್ಮ ಗಾಂಧೀಜಿಯವರ ಸಂದೇಶದಂತೆ ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ ಪ್ರತಿಯೋರ್ವ ವ್ಯಕ್ತಿಗೂ ಸಹ ಮೊದಲು ಎರಡು ಹೊತ್ತು ಸಮೃದ್ಧಿಯಾಗಿ ಊಟ ದೊರಕಬೇಕು.

*ಮಹಾತ್ಮಗಾಂಧೀಜಿಯವರ ಬಗ್ಗೆ ನಿಮ್ಮ ಅನಿಸಿಕೆ ಏನು ?*

ಆತ ದೈವೀವರ್ಗದ ಮಾನವ. ಈ ಪುಣ್ಯ ಪುರುಷನನ್ನು ನಾವು ಕೇವಲ ಭಾರತೀಯ ಎಂದು ಭಾವಿಸಿದರೆ ಅಪಚಾರವಾಗುತ್ತದೆ. ಗಾಂಧೀಜಿ ನಿಜಕ್ಕೂ ಮಹಾತ್ಮ. ಇಡೀ ವಿಶ್ವವನ್ನೇ ತನ್ನ ಮನೆಯಾಗಿ ಕಂಡ ವಿಶ್ವಪ್ರೇಮಿ, ವಿಶ್ವದುದುಂಬಿ, ಆತ ಸಮತಾವಾದಿಯೂ ಅಹುದು, ಮಾನವತಾವಾದಿಯೂ ಅಹುದು.

*ತಾವು ನಮ್ಮ ರಾಜಕಾರಣಿಗಳಿಗೆ ನೀಡುವ ಸಂದೇಶವೇನು ?*

ನುಡಿದಂತೆ ನಡೆಯಿರಿ. ಸ್ವಾತಂತ್ರ್ಯದ ಫಲ ಸರ್ವರಿಗೂ ಮುಟ್ಟಿಸಲು ಬದುಕು ಸವೆಸಿ. ಸನ್ಮಾರ್ಗದಲ್ಲಿ ನಡೆದು, ಧರ್ಮಭೀರುಗಳಾಗಿ ನಡೆಯಿರಿ.

*ನಮ್ಮ ಜನತೆಗೆ ನೀಡುವ ಸಂದೇಶವೇನು ?*

ಮಾನವ ಜನ್ಮ ದೊಡ್ಡದು, ಇದನ್ನು ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ, ಎಂದು ದಾಸರು, ಶರಣರು ಹೇಳಿದ್ದಾರೆ. ಮಾನವ ಜನ್ಮ ನಿಜಕ್ಕೂ ದೊಡ್ಡದು. ಋಣತ್ರಯಗಳನ್ನು ತೀರಿಸಲು ಮುಂದಾಗಿ. ದಯವೇ ಧರ್ಮದ ತಳಹದಿಯಾಗಲಿ. ಕಾಯಕ ತತ್ವದಿಂದ ಬಾಳಿರಿ. ಕೂಡಿ ದುಡಿದು, ಕೂಡಿ ಉಣ್ಣಿರಿ, ಕೂಡಿ ಬಾಳಿರಿ.

*೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಡಾ|| ಯು.ಆರ್. ಅನಂತಮೂರ್ತಿ ಆಯ್ಕೆಯಾಗಿದ್ದಾರೆ. ಅವರ ಆಯ್ಕೆ ತಮಗೆ ಉಚಿತವೆನಿಸಿದೆಯೇ ?*

ಪಂಡಿತ ಮಂಡಲಿ ಅವರನ್ನು ಅಧ್ಯಕ್ಷ ಸ್ಥಾನಕ್ಕೆ ಆಯ್ಕೆ ಮಾಡಿದೆ. ನಾವು ಅದನ್ನು ಸ್ವಾಗತಿಸುತ್ತೇವೆ.

*ಜಿಲ್ಲೆಯಲ್ಲಿ ಬಹುವರ್ಷಗಳ ಅನಂತರ ಜರುಗುತ್ತಿರುವ ಸಾಹಿತ್ಯ ಸಮ್ಮೇಳನ ಇದಾಗಿದೆ. ಈ ಶುಭ ಸಂದರ್ಭದಲ್ಲಿ ಜಿಲ್ಲಾ ಜನತೆಗೆ ತಾವು ನೀಡುವ ಸಂದೇಶವೇನು ?*

ಸಮ್ಮೇಳನದ ಯಶಸ್ಸು ವ್ಯಷ್ಟಿಪ್ರಜ್ಞೆಯಿಂದ ಆಗುವಂತದಲ್ಲ; ಅದು ಸಮಷ್ಟಿ ಪ್ರಜ್ಞೆಯ ಏಕತೆಯಿಂದ ಆಗುವಂತದ್ದು. ಜಿಲ್ಲೆಯ ಎಲ್ಲರೂ ಕೂಡಿ ದುಡಿಯಿರಿ. ಶ್ರಮದಾಯಕ ಮಾಡಿ. ಸಮ್ಮೇಳನದ ಉದ್ದೇಶ ಗುರಿಮುಟ್ಟಬೇಕು. ಇದು ತುಮಕೂರಿಗೆ ಮಾತ್ರವಲ್ಲ; ರಾಜ್ಯಕ್ಕೆ, ರಾಷ್ಟ್ರಕ್ಕೆ ಗೌರವ ತರುವಂತಾಗಬೇಕು. ಎಲ್ಲಾ ಸಮಿತಿಗಳೊಂದಿಗೆ ಜನ ಕೈಜೋಡಿಸಬೇಕು. ಕೂಡಿ ದುಡಿಯಬೇಕು. ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಲೆಂದು ಶುಭ ಹಾರೈಸುತ್ತೇನೆ.

(ಕೃಪೆ : ಪ್ರಜಾಪ್ರಗತಿ) ☆







# ಮಾನವೀಯತೆಯ ಸಾಕಾರಮೂರ್ತಿ

ಪ್ರೊ. ಹ.ಬ. ಮಹದೇವಪ್ಪ
ಜಿಲ್ಲಾಧ್ಯಕ್ಷರು, ಶರಣ ಸಾಹಿತ್ಯ ಪರಿಷತ್ತು
ತುಮಕೂರು

**ಮಾ**ನವ ಕುಲೋದ್ಧಾರಕ್ಕಾಗಿ ರಾಜರುಗಳು ತಮ್ಮ ಆಳ್ವಿಕೆಯ ಕಾಲದಲ್ಲಿ ಕೆರೆಗಳನ್ನು, ಬಾವಿಗಳನ್ನು, ದೇವಾಲಯ ಗಳನ್ನು, ಆಣೆಕಟ್ಟುಗಳನ್ನು, ಆಸ್ಪತ್ರೆಗಳನ್ನು, ಅನ್ನ ಛತ್ರಗಳನ್ನು, ಅರವಟ್ಟಿಗೆಗಳನ್ನು, ಕಟ್ಟಿಸಿದ್ದಾರೆ. ಸಾಲು ಮರಗಳನ್ನು ನೆಡಿಸಿದ್ದಾರೆ. ಆಧುನಿಕ ಕಾಲದಲ್ಲಿ ಪ್ರಜಾ ಪ್ರತಿನಿಧಿಗಳು ಶಾಲಾ ಕಾಲೇಜುಗಳನ್ನು ವಿದ್ಯಾರ್ಥಿ ನಿಲಯಗಳನ್ನು, ಅನಾಥಾಶ್ರಮ ಗಳನ್ನು ಆರಂಭಿಸಿದ್ದಾರೆ. ಇವೆಲ್ಲಾ ಕೆಲಸಗಳನ್ನು ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ವಿಶೇಷವಾಗಿ ವೀರಶೈವ ಮಠಗಳು ಮಾಡುವುದರ ಮೂಲಕ ನಿಜವಾದ ಮಾನವ ಧರ್ಮ ಸೇವೆ ಯನ್ನು ಪ್ರಾಮಾಣಿಕವಾಗಿ ಮಾಡಿರುವುದು ಮೆಚ್ಚುವ ವಿಷಯವಾಗಿದೆ. ಪ್ರಮುಖವಾಗಿ ಅನ್ನ ದಾಸೋಹ, ಜ್ಞಾನ ದಾಸೋಹ, ಸಾಹಿತ್ಯ ದಾಸೋಹಕ್ಕಾಗಿ ಮಠಗಳು ಕೊಟ್ಟ ಕೊಡುಗೆ ಅಪಾರವಾಗಿದೆ. ಶ್ರೀ ಸಿದ್ಧಗಂಗಾ ಮಠದ ಕಾಣಿಕೆ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದಿರುವುದು ಅಭಿಮಾನ ಉಂಟಾಗುತ್ತದೆ. ಇಂತಹ ಮಹಾ ಕೈಂಕರ್ಯಕ್ಕೆ ಕಾರಣೀಭೂತ ರಾಗಿರುವವರು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು. ತಮ್ಮ ೯೫ನೇ ವಯಸ್ಸಿನಲ್ಲಿಯೂ ಹಗಲಿರುಳು ಸಮಾಜದ ಸರ್ವ ಜನಾಂಗದವರ ಸರ್ವತೋಮುಖ ಅಭಿವೃದ್ಧಿಗಾಗಿ ಅಹರ್ನಿಶಿ ದುಡಿಯುತ್ತಾ ಭವ್ಯ ಭಾರತದ ಭವಿಷ್ಯದ ನಿರ್ಮಾಪಕರಾಗುವ ಪೀಳಿಗೆಗಾಗಿ ತ್ರಿವಿಧ ದಾಸೋಹದಿಂದ ಸೇವೆಗೈಯ್ಯುವುದರ ಮೂಲಕ 'ದುಡಿಮೆಯ ದೇವ'ರಾಗಿರುವವರು ಪೂಜ್ಯ ಶ್ರೀಗಳೆಂದರೆ ಅತಿಶಯೋಕ್ತಿಯಲ್ಲ. ಎಂಟು ಸಾವಿರ ಮಕ್ಕಳು ಜಾತ್ಯಾತೀತ ವಾಗಿ ಇಂದು ಮಠದಲ್ಲಿ ವಿದ್ಯಾಭ್ಯಾಸ ಮಾಡುತ್ತಾ, ಊಟ, ವಸತಿ ಪಡೆದಿದ್ದಾರೆಂದರೆ ಪೂಜ್ಯರ ಅದ್ಭುತ ಸಾಧನೆಗೆ ಸಾಕ್ಷಿಯಲ್ಲವೆ ? ಜಗತ್ತಿನ ಯಾವುದೇ ಪ್ರದೇಶದಲ್ಲಿಯೂ ಇಂಥ ಉಚಿತ ಸೇವೆ ಅವಿರತವಾಗಿ ನಡೆದಿರುವುದು ನಮಗೆ ತಿಳಿದಿಲ್ಲ. ಭಾರತದ ರಾಷ್ಟ್ರಪತಿಗಳು, ಪ್ರಧಾನಮಂತ್ರಿಗಳು ಪೂಜ್ಯರ ಮಹಾಸೇವೆಯನ್ನು ಮುಕ್ತಕಂಠದಿಂದ ಪ್ರಶಂಶಿಸಿದ್ದಾರೆ. ವಿದೇಶೀಯರು ಮೆಚ್ಚಿ ಹೊಗಳಿದ್ದಾರೆ. ಪ್ರಜಾ ವರ್ಗವು ಪೂಜ್ಯರಿಗೆ ಧನ್ಯತೆಯ.ಕುಸುಮಗಳನ್ನು ಅರ್ಪಿಸುತ್ತಾ ಕೊಂಡಾಡಿದ್ದಾರೆ. ನಾಡಿನ ಮನೆಗಳಲ್ಲಿ ಸಿದ್ಧಗಂಗೆಯ ಜ್ಞಾನ ದೀಪವು ಬೆಳಗುತ್ತಿದೆ.

ಧಾರ್ಮಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸಾಹಿತ್ಯಕವಾಗಿ ಸಿದ್ಧಗಂಗಾ ಮಠಾಧೀಶ್ವರರ ಸೇವೆ ಅನುಪಮ ವಾಗಿದೆ, ಆದರ್ಶಣೀಯವಾಗಿದೆ.

ವಿದ್ಯೆಯಿಂದ ವ್ಯಕ್ತಿ ವಿವೇಕಿ, ವಿಚಾರಶೀಲ, ವಿನಯವಂತನಾಗಿ ಸಮಾಜದಲ್ಲಿ ಬಾಳುವ ರೀತಿ ನೀತಿಗಳನ್ನು ಕಲಿಯಲು ಸಾಧ್ಯ, ಅದೊಂದು ಮಹಾಸಂಪತ್ತು. ಆದ್ದರಿಂದ ಎಲ್ಲರೂ ವಿದ್ಯೆ ಕಲಿಯಲೇ ಬೇಕು. ಹೆಣ್ಣು-ಗಂಡೆಂಬ ಭೇದವಿಲ್ಲ. ನಗರ-ಗ್ರಾಮವೆಂಬ ತಾರತಮ್ಯವಿಲ್ಲ, ಬಡವ ಬಲ್ಲಿದನೆಂಬ ಭಾವವಿಲ್ಲದೆ ಸರ್ವರಿಗೂ ವಿದ್ಯೆ ದೊರೆತರೆ ವ್ಯಕ್ತಿಗಳು ತಮ್ಮ ಕಾಲ ಮೇಲೆ ತಾವು ನಿಂತು ಬದುಕಲು ಸಾಧ್ಯವೆಂದು, ಮನಗಂಡ ಪರಮ ಪೂಜ್ಯರು ಮೊದಲ ಆದ್ಯತೆಯ ಮೇರೆಗೆ ಪೂರ್ವ ಪ್ರಾಥಮಿಕದಿಂದ ಆರಂಭಿಸಿ, ಮಾಧ್ಯಮಿಕ ಶಾಲೆಗಳು, ಪ್ರೌಢ ಶಾಲೆಗಳು, ಪ್ರಥಮ ದರ್ಜೆ ಕಾಲೇಜುಗಳು, ಶಿಕ್ಷಕರ ತರಬೇತಿ ಕಾಲೇಜುಗಳು, ಶಿಕ್ಷಣ ಮಹಾವಿದ್ಯಾಲಯ, ಅಂಧ ಮತ್ತು ಅಂಗವಿಕಲ ಮಕ್ಕಳ ಶಾಲೆಗಳು, ತಾಂತ್ರಿಕ ಮತ್ತು ಮಹಾ ತಾಂತ್ರಿಕ ಕಾಲೇಜುಗಳು, ಫಾರ್ಮಸಿ ಕಾಲೇಜು, ಸಂಸ್ಕೃತ ಪಾಠಶಾಲೆಗಳು, ವಿದ್ಯಾರ್ಥಿ-ವಿದ್ಯಾರ್ಥಿನಿಯರ ನಿಲಯಗಳನ್ನೂ ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಆರಂಭಿಸಿ, ಸಾವಿರಾರು ಮಕ್ಕಳು ವಿದ್ಯೆ ಕಲಿಯಲು ಅವಕಾಶ ಮಾಡಿಕೊಟ್ಟಿದ್ದಾರೆ. ವಿಶಾಲವಾದ

ಮೈದಾನದಲ್ಲಿ ವ್ಯವಸ್ಥಿತವಾದ ಕಟ್ಟಡಗಳೊಂದಿಗೆ. ಎಲ್ಲಾ ರೀತಿಯ ಪಾಠ, ಪೀಠೋಪಕರಣಗಳನ್ನು ಒದಗಿಸಿ, ಉತ್ತಮ ಸೇವೆಯ ಬೋಧಕ ಬೋಧಕೇತರರನ್ನು ನೇಮಿಸಿ, ಸೇವೆಗೆ ಅವಕಾಶ ಮಾಡಿರುವುದನ್ನು ಒಮ್ಮೆ ವೀಕ್ಷಿಸಿ ಬಂದರೆ ಪೂಜ್ಯರ ಸಾಧನೆಯ ಅರಿವಾಗುತ್ತದೆ. ಒಂದು ವಿಶ್ವವಿದ್ಯಾನಿಲಯ ಮಾಡುವ ಕೆಲಸವನ್ನು ಒಂದು ಮಠ ಮಾಡುತ್ತಿದೆಯೆಂದರೆ ತಪ್ಪಾಗಲಾರದು. ನಿರಂತರವಾಗಿ ಪ್ರಕಟವಾಗುತ್ತಿರುವ ನೈತಿಕ ಶಿಕ್ಷಣದ ವಿಷಯಗಳಿಗೆ ಒತ್ತು ಕೊಟ್ಟಿರುವಲ್ಲಿ 'ಸಿದ್ಧಗಂಗಾ' ಮಾಸ ಪತ್ರಿಕೆ ಓದುಗರ ಕಣ್ಮಣಿಯಾಗಿದೆ. ಆದರ್ಶಗಳ ಮಾಣಿಕ್ಯವಾಗಿದೆ. ಹೆಣ್ಣು ಮಕ್ಕಳಿಗಾಗಿ ಕಾಲೇಜುಗಳು ನಗರದಲ್ಲಿ ಪ್ರತ್ಯೇಕವಾಗಿ ನಡೆಯುತ್ತಿರುವುದು ಅವರ ಬಾಳಿಗೆ ಹಚ್ಚಿರುವ ಬೆಳಕೆನ್ನಬಹುದು. 'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ', ಆ ನಿಮಿತ್ತ ಅವರು ಚೆನ್ನಾಗಿ ಕಲಿತು ಬಾಳನ್ನು ಬೆಳಗಿಸುವ ಜ್ಯೋತಿಯಾಗಬೇಕೆಂದು ಪೂಜ್ಯರು ಆಶಿಸುತ್ತಾರೆ. ಶಾಲಾ ಕಾಲೇಜುಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ, ನಗರ-ಗ್ರಾಮಾಂತರ ಪ್ರದೇಶಗಳಲ್ಲಿ ಶರಣರ ಮತ್ತು ಮಹಾದಾರ್ಶನಿಕರ ವಿಚಾರಗೋಷ್ಠಿಗಳನ್ನು ಏರ್ಪಡಿಸುವುದರ ಮೂಲಕ ಕಲಿಯುವವರಿಗೆ ಪೂಜ್ಯರು ಮಾರ್ಗದರ್ಶಕರಾಗಿದ್ದಾರೆ. ಪೂಜ್ಯರ ಆದರ್ಶಗಳನ್ನು, ಆಶಯಗಳನ್ನು ಮನವರಿಗೆ ಮಾಡಿಕೊಂಡು ಅವರ ಆಶೀರ್ವಾದದಿಂದ ಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಅನವರತ ಸೇವೆಯನ್ನು ಮಾಡುತ್ತಿದ್ದಾರೆ. ಆಡಳಿತ ಸಿಬ್ಬಂದಿಗಳ ಸೇವೆಯು ಗಣನೀಯವಾಗಿ ಸಲ್ಲುತ್ತಿದೆ. ಎಲ್ಲೆಡೆಯೂ ಶಿಸ್ತು, ಶ್ರದ್ಧೆ, ಸಜ್ಜನಿಕೆಯ ಭಾವನೆಯಿಂದ ಬೋಧನೆ ನಡೆಯುತ್ತಿದೆ. ಸಿದ್ಧಗಂಗೆಯಲ್ಲಿ ಕಲಿತರೆ ಸಿದ್ಧಪುರುಷರಾಗಬಹುದೆಂಬ ಭಾವನೆ ನಿಜವೆನಿಸುತ್ತದೆ. ದೇವರು ಮಾನವ ನಾಗುವುದು ಪುರಾಣಗಳಲ್ಲಿ ಕೇಳಿಬಂದ ಕತೆಯಾದರೆ, ಸಕಲ ಸದ್ಗುಣಾಚರಣೆಗಳ ಮೂಲಕ ಮಾನವನೇ ದೇವರಾಗ ಬಹುದೆಂದು ಸಾಧಿಸಿ ತೋರಿಸಿರುವ ಮಹಾ ಮಾನವತ್ವದ ಮೇರು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಒಳ್ಳೆಯ ಪುಸ್ತಕಗಳನ್ನು ಸತತವಾಗಿ ಅಭ್ಯಾಸ ಮಾಡುವುದರಿಂದ ಜ್ಞಾನಗಳಿಕೆಯಾಗುವುದಲ್ಲದೆ, ಸಜ್ಜನ ರಾಗಲು ಸಾಧ್ಯವೆಂದು ತಿಳಿದು, ಶ್ರೀಮಠದಲ್ಲಿ ಧಾರ್ಮಿಕ ಕೃತಿಗಳ ಮಾರಾಟದ ಮಳಿಗೆಯೊಂದನ್ನು ತೆರೆಯಲಾಗಿದೆ. ದಿನನಿತ್ಯ ಸಾವಿರಾರು ಮಂದಿ ಭಕ್ತರು ಪುಸ್ತಕಗಳನ್ನು ಕೊಂಡು ಓದಿ ಆನಂದಿಸಿ ವಿಚಾರವಂತರಾಗಿ ಸತ್ಪ್ರಜೆಗಳಾಗುತ್ತಿದ್ದಾರೆ.

ಮಠದಲ್ಲಿ ಪ್ರತಿನಿತ್ಯ ಪೂಜ್ಯರ ಸಮ್ಮುಖದಲ್ಲಿ ಮುಂಜಾನೆ ಮತ್ತು ಸಂಜೆ ೬-೩೦ ಗಂಟೆಗೆ ಎಂಟು ಸಾವಿರ ಮಕ್ಕಳು ಸ್ನಾನಮಾಡಿ, ಬಿಳಿ ಧೋತರ ಮತ್ತು ಕಾವಿ ವಸ್ತ್ರ ಧರಿಸಿ, ಹಣೆ ತುಂಬ ವಿಭೂತಿ ಧರಿಸಿ, ಸಾಲಾಗಿ ಕುಳಿತು ಕನ್ನಡ ವಚನಗಳನ್ನು ಮತ್ತು ಸಂಸ್ಕೃತ ಶ್ಲೋಕಗಳನ್ನು ಹೇಳುವುದನ್ನು ಕೇಳುವುದೇ ಪುಣ್ಯವೆನ್ನಬಹುದು. ಅನುಭವಿಗಳಿಂದ ಅಮೃತವಾಣಿಗಳನ್ನು ತಿಳಿಸುವುದು, ಅನಂತರ ಪೂಜ್ಯರ ಶ್ರೀವಾಣಿ ಮಕ್ಕಳಿಗೆ ಮತ್ತು ಭಕ್ತಾದಿಗಳಿಗೆ ಲಭ್ಯವಾಗುವುದು, ಪೂರ್ವಾಪರ ಸುಕೃತವೆನ್ನ ಬಹುದು.

೧೧ ಮತ್ತು ೧೨ನೆಯ ಶತಮಾನದ ಶರಣರ ವಚನ ಸಾಹಿತ್ಯ ಸುಧೆಯನ್ನು ನಾಡಿನಾದ್ಯಂತ ನಿರಂತರ ಉಪನ್ಯಾಸ ಮತ್ತು ಬೋಧನೆಯ ಮೂಲಕ ಮೂಡಿಸುತ್ತಿರುವುದು ಜನರ ಬದುಕಿನ ಶಿಕ್ಷಣಕ್ಕೆ ಶ್ರೀಯವರ ಕೊಡುಗೆಯೆನ್ನ ಬಹುದು. ಭಕ್ತಿ ಭಂಡಾರಿ ಬಸವಣ್ಣನವರ ಜೀವನವನ್ನು ಆಧರಿಸಿ ರಚಿತವಾಗಿರುವ 'ಶ್ರೀ ಜಗಜ್ಯೋತಿ ಬಸವೇಶ್ವರ' ಎಂಬ ನಾಟಕವನ್ನು ರಾಜ್ಯ ಮತ್ತು ಅಂತರರಾಜ್ಯಗಳಲ್ಲಿ ಪ್ರದರ್ಶಿಸಲು ಪೂಜ್ಯರೇ ನೇತೃತ್ವ ವಹಿಸಿರುವುದನ್ನು ಗಮನಿಸಿದರೆ ಶ್ರೀಗಳ ಶ್ರಮದ ಅರಿವಾಗುವುದು. ಈಗಾಗಲೇ ಈ ನಾಟಕ ಸುಮಾರು ೬೦೦ ಕ್ಕೂ ಹೆಚ್ಚು ಪ್ರದರ್ಶನಗಳನ್ನು ನೀಡಿ ದಾಖಲೆ ನಿರ್ಮಿಸಿದೆ.

ಹೀಗೆ ತಮ್ಮ ತನು-ಮನ-ಧನವನ್ನು ಜನರಿಗಾಗಿ ಮುಡುಪಿಟ್ಟು-ದಯೆ-ಕರುಣಾ ಮೂರ್ತಿಗಳಾಗಿ ಬಸವ ತತ್ವ ಪಥದಲ್ಲಿ ಮುಂದೆ ಸಾಗುತ್ತಿದ್ದಾರೆ.

*ಸದ್ದುಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ ।*
*ಕಾಯಕವೆ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ ।*
*ಕಾವಿಯುಡುಗೆಯನುಟ್ಟು ನಭವೇ ಕಿರಣ ಹಸ್ತವ ಚಾಚಿದೆ ।*
*ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆದಿದೆ ।*

ಕವಿವರ್ಯ ಡಾ. ಜಿ.ಎಸ್. ಶಿವರುದ್ರಪ್ಪನವರ ಈ ನುಡಿಮುತ್ತುಗಳು ಶ್ರೀಯವರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿ.

